# ದರಿದೇವರು : ಒಂದು ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರುಪ್ರಬಂಧ

ಸಂಶೋಧಕರು
**ಗುರುಬಸಯ್ಯ ಸಿ. ಮಠ**

ಮಾರ್ಗದರ್ಶಕರು
**ಡಾ. ವ್ಹಿ. ಎಸ್. ಮಾಳಿ**




ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ
ಹಾರೂಗೆರೆ, ಜಿಲ್ಲೆ: ಬೆಳಗಾವಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-583276

೨೦೧೨

# ದರಿದೇವರು : ಒಂದು ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಿದ ಸಂಶೋಧನ ಕಿರುಪ್ರಬಂಧ

ಸಂಶೋಧಕರು
ಗುರುಬಸಯ್ಯ ಸಿ. ಮಠ

ಮಾರ್ಗದರ್ಶಕರು
ಡಾ. ವ್ಹಿ. ಎಸ್. ಮಾಳಿ




ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ
ಹಾರೂಗೆರೆ, ಜಿಲ್ಲೆ: ಬೆಳಗಾವಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

೨೦೦೨

## ದೃಢೀಕರಣ ಪತ್ರ

**ಶ್ರೀ ಗುರುಬಸಯ್ಯ ಸಿ. ಮಠ** ಅವರು ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ **"ದರಿದೇವರು: ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಕಿರುಪ್ರಬಂಧವು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಒಂದು ಮೂಲ ಸಂಶೋಧನ ಪ್ರಬಂಧವಾಗಿದೆ.

ಈ ಕಿರುಪ್ರಬಂಧವು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತಿದ್ದೇನೆ.

**ಸ್ಥಳ: ಹಾರೊಗೆರೆ**

**ದಿನಾಂಕ:**

**ಮಾರ್ಗದರ್ಶಕರು**

**ಡಾ. ವ್ಹಿ. ಎಸ್. ಮಾಳಿ**

## ಪ್ರಮಾಣ ಪತ್ರ

**"ದರಿದೇವರು: ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ಕಿರುಪ್ರಬಂಧವನ್ನು ಡಾ. ವ್ಹಿ.ಎಸ್. ಮಾಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದ್ದು, ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರ, ಹಾರೂಗೆರೆಯಿಂದ ಎಂ.ಫಿಲ್. ಪದವಿಗಾಗಿ ಸಲ್ಲಿಸಲಾಗಿದೆ.

ಈ ಪ್ರಬಂಧವು ಇಡಿಯಾಗಿ ಇಲ್ಲವೇ ಇದರಲ್ಲಿನ ಯಾವುದೇ ಭಾಗವಾಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಘೋಷಿಸುತ್ತೇನೆ.

**ಸಂಶೋಧಕರು**

**ಸ್ಥಳ: ಹಾರೂಗೆರೆ**

**ದಿನಾಂಕ:**

**ಗುರುಬಸಯ್ಯ ಸಿ. ಮಠ**

# ನಿವೇದನೆ

ಭಾರತ ಆಧ್ಯಾತ್ಮದ ತವರೂರು. ಧರ್ಮ, ಸಂಸ್ಕೃತಿಗಳ ತಾಣ. ಇಲ್ಲಿರುವಷ್ಟು ಮತ, ಧರ್ಮಗಳು ಎಲ್ಲಿಯೂ ಇಲ್ಲ. ವಿವಿಧತೆಯಲ್ಲಿ ಏಕತೆ ಕಾಣುವ ವಿಶಾಲ ಮನೋಭಾವ ಇಲ್ಲಿದೆ. ದೇವಗಣದ ಭೈರವನು ಸಪ್ತಋಷಿಗಳ ಶಾಪದಿಂದ ಭೂಲೋಕದಲ್ಲಿ ದರೆಪ್ಪನೆಂಬ ಹೆಸರಿನಿಂದ ಅವತರಿಸಿ ಬ್ರಹ್ಮಚಾರಿಯಾಗಿದ್ದುಕೊಂಡೆ ಲೋಕೋದ್ಧಾರ ಮಾಡಿ ಆತ್ಮಗೌರವ ಕಾಪಾಡಿಕೊಳ್ಳುವ ವೀರನಂತೆ ಯುದ್ಧಮಾಡಿ ಕೊನೆಗೆ ಗುಡ್ಡದಲ್ಲಿ ಸೇರಿದ ಮಹಾಪುರುಷರೆ ಶ್ರೀ ದರಿದೇವರೆಂದು ಖ್ಯಾತನಾಮರಾದರು.

ಓದು, ಉಪನ್ಯಾಸದಲ್ಲಿ ನನ್ನ ಪಾಡಿಗೆ ನಾನು ನಿರಮ್ಮಳವಾಗಿದ್ದಾಗ ಹೆಚ್ಚಿನ ಓದಿನಲ್ಲಿ ಆಸಕ್ತಿ ಮೂಡಿಸಿದವರು ಶಿರಹಟ್ಟಿಯ ಶ್ರೀ ಜಗದ್ಗುರು ಫಕೀರ ಸಿದ್ಧರಾಮ ಮಹಾಸ್ವಾಮಿಗಳು. ಇವರಿಗೆ ಅನಂತ ನಮನಗಳು.

"ದರಿದೇವರು : ಒಂದು ಸಾಂಸ್ಕೃತಿಕ ಅಧ್ಯಯನ" ಸಂಶೋಧನ ಪ್ರಬಂಧವನ್ನು ಹಾರೂಗೆರೆಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸುತ್ತಿರುವ ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಪ್ರೇರಣೆ ನೀಡಿ, ಪ್ರೊತ್ಸಾಹಿಸಿ, ಸೂಕ್ತ ಮಾರ್ಗದರ್ಶನ ನೀಡಿದ ಡಾ. ವ್ಹಿ.ಎಸ್. ಮಾಳಿ ಗುರುಗಳಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಗೃಹ ನಿರ್ಮಾಣದ ಕಾರ್ಯದಲ್ಲಿ ತೊಡಗಿಕೊಂಡಿದ್ದ ನಾನು ನಿಗದಿತ ಅವಧಿಯಲ್ಲಿ ಈ ಸಂಶೋಧನ ಕಾರ್ಯ ಪೂರ್ಣಗೊಳಿಸುವುದು ಸಾಧ್ಯವಾಗುತ್ತದೆಯೋ ಇಲ್ಲವೋ ಎಂಬ ಆತಂಕ ನನ್ನದಾಗಿತ್ತು. ಆ ಸಂದರ್ಭದಲ್ಲಿ ನನ್ನನ್ನು ಪ್ರೊತ್ಸಾಹಿಸಿ ಕ್ಷೇತ್ರಕಾರ್ಯದಲ್ಲಿ ಸಹಕರಿಸಿ, ಸೂಕ್ತ ಅವಧಿಯಲ್ಲಿ ಪ್ರಬಂಧ ರಚನೆಗೊಳ್ಳುವಂತೆ ನೋಡಿಕೊಂಡವರು ಸಹೋದರರು, ಲಿಂಗರಾಜ ಕಾಲೇಜಿನ ಕನ್ನಡ ಉಪನ್ಯಾಸಕರು ಆದ ಪ್ರೊ. ರವೀಂದ್ರ ವ್ಹಿ. ಚಿಕ್ಕಮಠ ಅವರು. ಅವರಿಗೆ ಅನಂತ ವಂದನೆಗಳು.

ನನ್ನ ಸಂಶೋಧನ ಕಾರ್ಯಕ್ಕೆ ಪ್ರೊತ್ಸಾಹ, ಸಲಹೆ-ಸೂಚನೆಗಳನ್ನು ನೀಡಿದ ಮಹನೀಯರು ಅನೇಕ ಜನರಿದ್ದಾರೆ. ಬೀಳಗಿ ಸರಕಾರಿ ಪದವಿ ಪೂರ್ವ ಕಾಲೇಜಿನ ವಿದ್ಯಾಗುರು ಡಾ. ಬಿ.ಎಸ್. ಸಿಂಗೆ, ಜತ್ತ ಹೈಸ್ಕೂಲ ಮುಖ್ಯಾಧಿಕಾರಿಗಳಾದ ಶ್ರೀ ಎ.ಎ. ಮೇತ್ರಿ, ಸಂಖ ಗುರುಬಸವ ವಿದ್ಯಾಮಂದಿರ ಡಾ. ಕೆ.ಕೆ. ಪತ್ತಾರ ಮಣುರದ ಶ್ರೀ ಸುರೇಶ ಸಿಂದಗಿ, ಫ. ಗು. ಹಳಕಟ್ಟಿ ಸಂಶೋಧನ ಕೇಂದ್ರದ ಸಂಯೋಜನಾಧಿಕಾರಿಯಾದ ಡಾ. ಎಂ. ಎಸ್. ಮದಭಾವಿ ಅವರಿಗೆ ನಾನು ಋಣಿಯಾಗಿದ್ದೇನೆ.

ನನ್ನ ಸಂಶೋಧನ ಕಾರ್ಯದಲ್ಲಿ ನೆರವಾದ ಆತ್ಮೀಯರಾದ ನನ್ನ ಸಹೊದ್ಯೋಗಿಗಳೂ ಆದ ಶ್ರೀ ಎಂ. ಬಿ. ಕಣಿಗಿಲ, ಶ್ರೀ ಪಿ.ಬಿ. ಬಿರಾದಾರ, ಶ್ರೀ ಮಲ್ಲಾಡಿ. ಎಸ್.ಡಿ. ದರಿದೇವರ ಪೂಜಾರಿಯಾದ ಶ್ರೀ ಧೂಳಪ್ಪ ಪೂಜಾರಿ, ದರಿದೇವರ ಟ್ರಸ್ಟ ಕಮೀಟಿಯ ಅಧ್ಯಕ್ಷರಾದ ಶ್ರೀ ಎ. ಕೆ. ಬಿರಾದಾರ, ಕಾರ್ಯದರ್ಶಿಯಾದ ಶ್ರೀ ಸಿದ್ದು ಬಿಳೂರ, ಸದಸ್ಯರಾದ ಶ್ರೀ ಶಿವಾನಂದ ಬಿರಾದಾರ ಅವರಿಗೆ ನಾನು ಋಣಿಯಾಗಿರುವೆ.

ಕನಮಡಿಯ ಶ್ರೀ ಎಸ್, ಅನಂತಪೂರ, ಶ್ರೀ ಮಾಳಿ, ಹಾರೂಗೆರಿಯ ಪ್ರೊ. ಕಲಚಿಮಡ, ಶ್ರೀ ಗಟನಟ್ಟಿ, ಡಾ. ಸರಸ್ವತಿದೇವಿ ಭಗವತಿ, ಡಾ. ಹನುಮಂತ ಮೇಲಿನಮನಿ, ಎಂ.ಫಿಲ್. ಸಹದ್ಯೋಗಿಗಳಾದ ಶ್ರೀ. ಬಿ.ಎಸ್. ಕಾಪಸೆ, ಶ್ರೀ ಎಸ್.ಬಿ. ಉಕ್ಕಲಿ, ಶ್ರೀ ಮರಡಿ ಅವರು ನೀಡಿದ ಸಹಾಯ-ಸಲಹೆ-ಸಹಕಾರಗಳಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ನನ್ನನ್ನು ಆಶೀರ್ವದಿಸಿ, ಪೋಷಿಸಿ, ವಿದ್ಯೆಯನ್ನು ನೀಡಿದ ದೊಡ್ಡಪ್ಪ, ದೊಡ್ಡಮ್ಮ ತಂದೆ-ತಾಯಿಯವರಿಗೆ ನಮನಗಳು. ಸಂಶೋಧನ ಕಾರ್ಯದಲ್ಲಿ ಸಹಕರಿಸಿದ ಮಡದಿ ಸಾವಿತ್ರಿಗೆ, ಈ ಪ್ರಬಂಧ ರಚನೆಯ ಸಂದರ್ಭದಲ್ಲಿ ಸಹಾಯ-ಸಹಕಾರ ನೀಡಿದ ಎಲ್ಲಾ ಸಂದರ್ಶಕರಿಗೂ ನಾನು ಋಣಿಯಾಗಿದ್ದೇನೆ.

**ಗುರುಬಸಯ್ಯ ಸಿ. ಮಠ**

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ-ಸ್ವರೂಪ-ವ್ಯಾಪ್ತಿ

**ಪೀಠಿಕೆ:** ಧಾರ್ಮಿಕ ನೆಲೆಗಟ್ಟಿನ ಮೇಲೆ ನಿರ್ಮಾಣಗೊಂಡ ಭಾರತದ ಸಂಸ್ಕೃತಿಯು ವಿಶಿಷ್ಟವಾಗಿದೆ. ಪ್ರದೇಶದಿಂದ ಪ್ರದೇಶಕ್ಕೆ ವೈವಿಧ್ಯಮಯವಾದ ಧರ್ಮ, ಆಚರಣೆ, ಸಂಪ್ರದಾಯಗಳನ್ನು ಹೊಂದಿದ ಭಾರತದಲ್ಲಿ ಪ್ರಾದೇಶಿಕವಾದ ನಂಬಿಕೆ ಮಹತ್ವವಾಗಿದೆ. ಇಂತಹ ನಂಬಿಕೆಗಳ ಸುತ್ತಲೇ ಬೆಳೆದುಬಂದ ಕನಮಡಿ ದರಿದೇವರು ಒಂದು ಪ್ರದೇಶದ ಪ್ರಬಲ ದೇವರಾಗಿ ರೂಪುಗೊಂಡಿದೆ.

ಕರ್ನಾಟಕ-ಮಹಾರಾಷ್ಟ್ರ ರಾಜ್ಯ ಗಡಿಭಾಗದಲ್ಲಿರುವ ಕನಮಡಿ ಗ್ರಾಮವು ದರಿದೇವರಿಂದಾಗಿ ಸುಕ್ಷೇತ್ರವಾಗಿ ಪ್ರಸಿದ್ಧಿಗೊಂಡಿದೆ. ಈ ದೇವಾಲಯವು ಎರಡೂ ರಾಜ್ಯಗಳ ಸಾಂಸ್ಕೃತಿಕ ಕೊಂಡಿಯಾಗಿಯೂ ಕಾರ್ಯನಿರ್ವಹಿಸುತ್ತಿರುವುದು ಇಲ್ಲಿಯ ಮತ್ತೊಂದು ಮಹತ್ವದ ವೈಶಿಷ್ಟ್ಯವಾಗಿದೆ.

**ಉದ್ದೇಶ:** ಧರ್ಮ, ಜಾತಿ, ಮತ, ಪಂಥಗಳಿಂದ ದೂರ ಉಳಿದು ಒಂದು ಪ್ರದೇಶದ ಆರಾಧ್ಯ ದೈವವಾದ ದರಿದೇವರು ವೈಶಿಷ್ಟ್ಯತೆಯನ್ನು ಸಾಂಸ್ಕೃತಿಕವಾಗಿ ಗುರುತಿಸಿ ಅದರ ಮಹತ್ವವನ್ನು ಗುರುತಿಸುವುದನ್ನು ಪ್ರಮುಖ ಉದ್ದೇಶವಾಗಿಟ್ಟುಕೊಂಡು, ಈ ಹಿನ್ನೆಲೆಯಲಿ ದೇಶೀ ಸಂಸ್ಕೃತಿಯನ್ನು ಸಾಂದರ್ಭಿಕವಾಗಿ ಶೋಧಿಸುವ ಕಾರ್ಯವನ್ನು ಕೈಕೊಳ್ಳಲಾಗಿದೆ. ಆಧುನಿಕ ಜಾಗತೀಕರಣದ ಯುಗದಲ್ಲಿಯೂ ನಮ್ಮ ಪರಂಪರೆ ಹೇಗೆ ಅನಾವರಣಗೊಳ್ಳುತ್ತಿದೆ ಎಂಬುದನ್ನು ತೋರಿಸುವುದೇ ಈ ಸಂಪ್ರಬಂಧದ ಉದ್ದೇಶವಾಗಿದೆ.

**ಸ್ವರೂಪ:** ದರಿದೇವರು ಬಗೆಗಿನ ಅಧ್ಯಯನವು ಸುಮಾರು ಏಳನೂರು ವರ್ಷಗಳ ವಿಶಿಷ್ಟವಾದ ಸಾಂಸ್ಕೃತಿಕ ಪರಿಚಯವನ್ನು ತಿಳಿಸಿಕೊಡುತ್ತದೆ. ಇಲ್ಲಿ ಸ್ಥಳೀಯ ಐತಿಹ್ಯಗಳು, ನಂಬಿಕೆಗಳು, ಆಚರಣೆ, ಸಂಪ್ರದಾಯಗಳೇ ಪ್ರಮುಖ ಆಕರಗಳಾಗಿರುವುದರಿಂದ ಇವುಗಳ ಹಿನ್ನೆಲೆಯಲ್ಲಿಯೇ ಅಧ್ಯಯನವನ್ನು ಕೈಕೊಂಡು ಕ್ಷೇತ್ರಕಾರ್ಯ, ಸಂದರ್ಶನಗಳ ಮೂಲಕ ಈ ಪ್ರಬಂಧವನ್ನು ಸಿದ್ಧಪಡಿಸಿಕೊಳ್ಳಲಾಗಿದೆ.

ದರಿದೇವರು ಕನಮಡಿಯ ಗ್ರಾಮದೇವರಾಗುವುದರ ಜೊತೆಗೆ ಒಂದು ಪ್ರದೇಶದ ಹಲವಾರು ಧರ್ಮ, ಜಾತಿ, ಜನಾಂಗಗಳ ಆರಾಧ್ಯದೈವವೂ ಆಗಿರುವುದರಿಂದ ಹಲವಾರು ವಿಶಿಷ್ಟ ಆಚರಣೆಗಳು ಈ ದೇವರ ಸುತ್ತ ಬೆಳೆದುಬಂದಿವೆ. ಇವುಗಳನ್ನು ಸಾಂದರ್ಭಿಕವಾಗಿ ಆಚರಿಸಲಾಗುತ್ತದೆ. ಅಲ್ಲದೆ ಕೆಲವು ಸಾಹಿತ್ಯ ಕೃತಿಗಳು, ಜನಪದ ಕಾವ್ಯಗಳು ದರಿದೇವರ ಕುರಿತು ರಚನೆಗೊಂಡಿವೆ. ಇವೆಲ್ಲವುಗಳನ್ನು ಮೂಲ ಆಕರಸಾಮಗ್ರಿಯನ್ನಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಜಾತ್ರೆ-ಉತ್ಸವಗಳನ್ನು ಪ್ರತ್ಯೇಕವಾಗಿ ವೀಕ್ಷಿಸಿ ಕನಮಡಿಯ ಹೊರತಾಗಿ ಬೇರೆ ಬೇರೆ ಭಾಗಗಳಿಂದ ಆಗಮಿಸಿ ಭಕ್ತರ ಸಂದರ್ಶನವನ್ನು ಕೈಕೊಂಡು ಅವರ ಅಭಿಪ್ರಾಯಗಳನ್ನು ಬಳಸಿಕೊಳ್ಳಲಾಗಿದೆ. ದೇವಾಲಯ, ಜಾತ್ರೆ ಮತ್ತು ಕೆಲವು ವೈಶಿಷ್ಟ್ಯಗಳ ಛಾಯಾಚಿತ್ರವನ್ನು ತೆಗೆದು ಅವುಗಳನ್ನು ಸಾಂದರ್ಭಿಕವಾಗಿ ಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ. ಕೆಲವು ಪ್ರಮುಖರ ಹೇಳಿಕೆಗಳನ್ನು ಧ್ವನಿಮುದ್ರಣಗೊಳಿಸಿಕೊಂಡು, ಅದರ ಮಾಹಿತಿಯನ್ನು ಪ್ರಬಂಧ ರಚನೆಯಲ್ಲಿ ಅಳವಡಿಸಿಕೊಳ್ಳಲಾಗಿದೆ.

**ವ್ಯಾಪ್ತಿ:** ದರಿದೇವರು ಸುಕ್ಷೇತ್ರವಾದ ಕನಮಡಿಯು ಕರ್ನಾಟಕ-ಮಹಾರಾಷ್ಟ್ರ ರಾಜ್ಯಗಳ ಗಡಿಭಾಗದಲ್ಲಿದೆ. ಈ ಹಳ್ಳಿಯೇ ಕರ್ನಾಟಕದ ಕೊನೆಯ ಹಳ್ಳಿ. ಇಲ್ಲಿಂದ ಮುಂದೆ ಮಹಾರಾಷ್ಟ್ರ ರಾಜ್ಯದ ಸೀಮೆ ಪ್ರಾರಂಭವಾಗುತ್ತದೆ. ಹೀಗಾಗಿ ದರಿದೇವರು ಎರಡೂ ರಾಜ್ಯಗಳ ಹಲವಾರು ಹಳ್ಳಿಗಳ ಮೇಲೆ ಪ್ರಭಾವವನ್ನು ಬೀರಿದೆ. ಪ್ರಸ್ತುತ ಪ್ರಬಂಧದಲ್ಲಿ ಈ ಪ್ರದೇಶದಲ್ಲಿ ಉಂಟಾದ ಪ್ರಭಾವವನ್ನು ಸಾಂಸ್ಕೃತಿಕ ಮಹತ್ವವನ್ನು ಕುರಿತು ಸಾಂದರ್ಭಿಕವಾಗಿ ಉಲ್ಲೇಖಿಸಲಾಗಿದೆ. ದರಿದೇವರು ಕಾಲಮಾನವು ನಿಖರವಾಗಿ, ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಆದರೂ ಕೆಲವು ಸ್ಥಳೀಯ ಐತಿಹ್ಯಗಳ ಪ್ರಕಾರ ೧೫ನೆಯ ಶತಮಾನದಲ್ಲಿ ದರಿದೇವರು ಇದ್ದಿರಬಹುದೆಂಬುದನ್ನು ಗುರುತಿಸಿಕೊಂಡು ಅಲ್ಲಿಂದ ಇಲ್ಲಿಯವರೆಗಿನ ಅವಧಿಯಲ್ಲುಂಟಾದ ಸಾಂಸ್ಕೃತಿಕ ಪ್ರಭಾವ, ಪರಿಣಾಮಗಳನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

ಈ ಪ್ರಬಂಧದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನವನ್ನು ಕೈಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿಯನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಭೌಗೋಳಿಕ ಹಿನ್ನೆಲೆಯನ್ನು ವಿವರಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ದರಿದೇವರ ಚರಿತ್ರೆಯನ್ನು ಪುರಾಣ, ಜಾನಪದ ಕಥೆಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ದರಿದೇವರ ದೇವಾಲಯದ ನಿರ್ಮಾಣ ಮತ್ತು ದೇವಾಲಯದ ಒಟ್ಟು ಪರಿಸರವನ್ನು ವಿವರಿಸಲಾಗಿದೆ. ಐದನೆಯ ಅಧ್ಯಾಯವು ದರಿದೇವರನ್ನು ಕುರಿತು ರಚಿತವಾಗಿರುವ ಜನಪದ ಸಾಹಿತ್ಯ, ಕಾವ್ಯಗಳನ್ನು ಕುರಿತು ತಿಳಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ದರಿದೇವರ ಜಾತ್ರೆಯ ಹಿನ್ನೆಲೆಯಲ್ಲಿ ಬೆಳೆದುಬಂದ ನಂಬಿಕೆಗಳನ್ನು ವಿವರಿಸಲಾಗಿದೆ. ಇಲ್ಲಿ ದರಿದೇವರ ಕುರಿತ ಹೇಳಿಕೆಗಳನ್ನು

ಹಲವಾರು ಭಕ್ತರಿಂದ ಸಂಗ್ರಹಿಸಲಾಗಿದೆ. ಕೆಲವು ಹೇಳಿಕೆಗಳು ಸತ್ಯದಿಂದ ದೂರವಾಗಿವೆ. ಅವುಗಳನ್ನು ಇಲ್ಲಿ ಪರಿಗಣಿಸಲಾಗಿಲ್ಲ. ಹೆಚ್ಚು ಜನರ ಹೇಳಿಕೆಗಳಲ್ಲಿ ಕಂಡು ಬಂದ ಸಾಮ್ಯತೆಯನ್ನು ಈ ಪ್ರಬಂಧದಲ್ಲಿ ಬಳಸಿಕೊಳ್ಳಲು ಪ್ರಯತ್ನಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಸಂಪ್ರಬಂಧದ ಒಟ್ಟಾರೆ ಫಲಿತವನ್ನು ವಿವರಿಸಲಾಗಿದೆ. ಜೊತೆಗೆ ದರಿದೇವರನ್ನು ಕುರಿತು ಆಗಬೇಕಾದ ಸಂಶೋಧನೆಗಳ ಬಗೆಗೆ ಸೂಚನೆಗಳನ್ನು ನೀಡುತ್ತ ಈ ಪ್ರಬಂಧವನ್ನು ಸಮಾರೋಪಗೊಳಿಸಲಾಗಿದೆ.



## ಅಧ್ಯಾಯ : ಎರಡು

# ಭೌಗೋಳಿಕ ಹಿನ್ನೆಲೆ

ದರಿದೇವರ ಸುಕ್ಷೇತ್ರ ಕನಮಡಿ ಗ್ರಾಮವು ಕರ್ನಾಟಕ-ಮಹಾರಾಷ್ಟ್ರ ರಾಜ್ಯಗಳ ಗಡಿಭಾಗದಲ್ಲಿದೆ. ವಿಜಾಪುರದಿಂದ ಪಶ್ಚಿಮಕ್ಕೆ ೪೪ ಕಿ.ಮೀ ದೂರದಲ್ಲಿದೆ. ವಿಜಾಪುರ ಮತ್ತು ಜತ್ತ ಮಾರ್ಗದ ರಾಜ್ಯ ಹೆದ್ದಾರಿಯಲ್ಲಿ ಜತ್ತದಿಂದ ಪೂರ್ವಕ್ಕೆ ೨೦ ಕಿ.ಮೀ ದೂರದಲ್ಲಿದೆ. ಭೌಗೋಳಿಕವಾಗಿ ಸಮುದ್ರಮಟ್ಟದಿಂದ ಸುಮಾರು ೨೦೦೦ ಅಡಿ ಎತ್ತರದಲ್ಲಿದೆ. ಉತ್ತರ ಅಕ್ಷಾಂಶದ ೧೫-೧೯ ಮತ್ತು ೧೭-೨೯, ಪೂರ್ವರೇಖಾಂಶದ ೭೫-೧೯ ಹಾಗೂ ೭೬-೩೨ ರ ಮಧ್ಯದಲ್ಲಿದೆ.

**ಹವಾಗುಣ :** ಸಾಮಾನ್ಯವಾಗಿ ಒಣಹವೆ ಇದ್ದು. ಅನಿಶ್ಚಿತ ಮಳೆಯಿಂದ ಕೂಡಿದೆ. ಉಷ್ಣತಾಮಾನ ಅತೀ ಹೆಚ್ಚೆಂದರೆ ೪೩ ಸೆ-೪೪ ಸೆ. ನಷ್ಟಿರುವ ದಾಖಲೆಗಳಿವೆ. ಜೂನ್ ಆರಂಭದಿಂದ ಸಪ್ಟೆಂಬರ ಅಂತ್ಯದವರೆಗೆ ಮುಂಗಾರು ಮಳೆಗಾಲವು, ಅಕ್ಟೋಬರ ಹಾಗೂ ನವ್ಹಂಬರ ತಿಂಗಳಲ್ಲಿ ಹಿಂಗಾರು ಮಳೆಗಾಲವಿರುತ್ತದೆ. ಅಂದರೆ ಡಿಸೆಂಬರ ತಿಂಗಳಲ್ಲಿ ಉಷ್ಣತಾಮಾನ ಅತೀ ಕಡಿಮೆಯೆಂದರೆ ೬ ಸೆ-೭ ಸೆ. ಇಂದ ೧೫ ಸೆ. ಇರುತ್ತದೆ.

**ಭೂಪ್ರದೇಶ :** ಇಲ್ಲಿಯ ಭೂಪ್ರದೇಶವು ಹೆಚ್ಚಾಗಿ ಕೆಂಪು, ಕಪ್ಪು ಮತ್ತು ಹಳದಿ ಮಿಶ್ರಿತ ಮಣ್ಣಿನಿಂದ ಕೂಡಿದೆ. ಸುತ್ತಮುತ್ತಲೆಲ್ಲ ಗುಡ್ಡ, ಕಣಿವೆಗಳಿಂದ ಆವೃತ್ತವಾಗಿದ್ದು, ಬಾಕ್ಸಟ ಮಿಶ್ರಿತ ಬಿರುಸಾದ ಕಲ್ಲಿನ ಪ್ರದೇಶವನ್ನು ಒಳಗೊಂಡಿದೆ.

**ಪ್ರಮುಖ ಬೆಳೆಗಳು :** ಈ ಪ್ರದೇಶದ ಬೆಳೆಗಳನ್ನು ಎರಡು ಹಂತಗಳಲ್ಲಿ ವಿಂಗಡಿಸಿಕೊಳ್ಳಬಹುದು. ೧. ಮುಂಗಾರು ಬೆಳೆಗಳು. ೨. ಹಿಂಗಾರು ಬೆಳೆಗಳು. ಮುಂಗಾರು ಬೆಳೆಗಳನ್ನು ಜೂನ್ ತಿಂಗಳ ಉತ್ತರಾರ್ಧದಿಮದ ಜುಲೈ ತಿಂಗಳ ಪೂರ್ವಾರ್ಧದವರೆಗೆ ಬಿತ್ತನೆ ಮಾಡಿ, ನವೆಂಬರನಿಂದ ಡಿಸೆಂಬರ್ ತಿಂಗಳವರೆಗೆ ಕೊಯ್ಲಿನ ಕಾರ್ಯ ನಡೆಯುತ್ತದೆ. ಮುಂಗಾರು ಋತುವಿನ ಪ್ರಮುಖ ಬೆಳೆಗಳು ಸಜ್ಜೆ, ಹೆಸರು, ಅಲಸಂದಿ, ಸೂರ್ಯಕಾಂತಿ, ಹುರಳಿ, ತೊಗರಿ, ಎಳ್ಳು, ನವಣೆ ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಹಿಂಗಾರಿ ಬೆಳೆಗಳನ್ನು ಸೆಪ್ಟೆಂಬರ್ ತಿಂಗಳಿನಿಂದ ನವಂಬರ ತಿಂಗಳ ಪೂರ್ವಾರ್ಧದವರೆಗೆ ಬಿತ್ತನೆ ಕಾರ್ಯ ಮಾಡಿ ಫೆಬ್ರುವರಿ ತಿಂಗಳ ಪೂರ್ವಾರ್ಧದವರೆಗೆ ಕೊಯ್ಲಿನ ಕಾರ್ಯ ನಡೆಯುತ್ತದೆ. ಹಿಂಗಾರಿನ ಪ್ರಮುಖ ಬೆಳೆಗಳು ಜೋಳ, ಹತ್ತಿ, ಗೋಧಿ, ಕಡಲೆ ಮುಂತಾದವುಗಳು. ಇತ್ತೀಚಿಗೆ ದ್ರಾಕ್ಷಿ, ದಾಳಿಂಬೆ, ಬಾಳೆ, ನಿಂಬೆ ಮುಂತಾದ ಪ್ರಮುಖ ತೋಟಗಾರಿಕೆಯ ಬೆಳೆಗಳನ್ನು ಬೆಳೆಯುತ್ತಾರೆ.

**ನಾಮವಿವೇಚನೆ :** ಕನಮಡಿಯ ಸ್ಥಳನಾಮದ ವಿವೇಚನೆಯನ್ನು ಇಲ್ಲಿಯ ಪ್ರಾಕೃತಿಕ ಹಿನ್ನೆಲೆಯ ಮೇಲಿಂದ ಮಾಡಲಾಗುತ್ತದೆ. ಕನಮಡಿಯ ಸುತ್ತ ಮುತ್ತಲೆಲ್ಲ ಗುಡ್ಡ, ಬೆಟ್ಟ, ಮಾರಡಿಗಳು ತುಂಬಿಕೊಂಡಿದ್ದರಿಂದ ಕಲ್+ಮೊರಡಿ=ಕಲ್‌ಮರಡಿ ಆಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕಲ್‌ಮರಡಿಯೆಂಬುದು ಗ್ರಾಮ್ಯಭಾಷೆಯಲ್ಲಿ ಕಲಮಡಿ, ಕನಮಡಿ, ಕಣಮಡಿ ಮುಂತಾದ ರೂಪಗಳಲ್ಲಿ ಬಳಕೆಗೊಳ್ಳುತ್ತಲಿದೆ.

**ಪ್ರಾಗೈತಿಹಾಸಿಕ :** ಕನಮಡಿಯು ಪ್ರಾಗೈತಿಹಾಸಿಕ ನೆಲೆಯಾಗಿತ್ತೆಂಬುದು ಇಲ್ಲಿಯ ಕೆಲವು ಕುರುಹುಗಳಿಂದ ತಿಳಿದುಬರುತ್ತದೆ. ಕನಮಡಿಯ ಕೆಲವು ತಳಪಾಯಗಳನ್ನು ಅಗೆಯುವಾಗ ದೊರೆಯುವ ಹಾಳು ಮಡಿಕೆ ಚೂರುಗಳು, ಗೊಂಬೆಗಳು ಮುಂತಾದವುಗಳು ದೊರೆತಿರುವುದನ್ನು ಗ್ರಾಮದ ಕೆಲವರು ತಿಳಿಸಿರುತ್ತಾರೆ. ಕಲಮಡಿಯ ಸುತ್ತಮುತ್ತಲಿನ ಭೌಗೋಳಿಕ ಪರಿಸರವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅತ್ಯಂತ ಆಯಕಟ್ಟಿನ ಸ್ಥಳದಲ್ಲಿರುವ ಈ ಗ್ರಾಮವು ಮಾನವನ ವಸತಿಗೆ ಅನುಕೂಲಕರವಾಗಿತ್ತೆಂಬುದು ತಿಳಿದು ಬರುತ್ತದೆ.

ಕನಮಡಿಯ ಸುತ್ತಮುತ್ತ ಹಲವಾರು ಊರುಗಳು ಇದ್ದುದರ ಬಗೆಗೆ ಹಲವಾರು ಕುರುಹುಗಳು ಕಂಡುಬರುತ್ತದೆ. ತುಪ್ಪದ ಹಟ್ಟಿ, ನಲನಟ್ಟಿ, ಒಂಟಿಹತ್ತಿ, ಗುರ್ಲಟ್ಟಿ ಮುಂತಾದ ಊರುಗಳು ಇಂದು ಅಸ್ಥಿತ್ವದಲ್ಲಿಲ್ಲ. ಆದರೆ ಇವುಗಳ ಹಲವು ಕುರುಹುಗಳು ಕನಮಡಿಯ ಸುತ್ತ ಮುತ್ತ ಈಗಲೂ ಕಂಡುಬರುತ್ತವೆ. ಬಹುಶಃ ಯಾವುದಾದರೂ ಪ್ರಕೃತಿ ವಿಕೋಪಕ್ಕೆ ಈ ಗ್ರಾಮಗಳು ನಾಶವಾಗಿರಬಹುದಾಗಿದೆ. ಕನಮಡಿಯು ಭೌಗೋಳಿಕವಾಗಿ ವಿಶಿಷ್ಟವಾದ ಅಯಕಟ್ಟಿನ ಪ್ರದೇಶದಲ್ಲಿರುವುದರಿಂದ ಇಲ್ಲಿ ಪ್ರಾಚೀನ ಕಾಲದಿಂದಲೂ ಮಾನವನ ವಾಸ್ತವ್ಯವಿರುವುದು ಖಚಿತವಾಗುತ್ತದೆ.

**ಇತಿಹಾಸ :** ಕನಮಡಿಯು ಐತಿಹಾಸಿಕವಾಗಿಯೂ ಮಹತ್ವವನ್ನು ಪಡೆದುಕೊಂಡಿದೆ. ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಕಳಚೂರಿ, ಯಾದವ, ಕರ್ಹಾಡ, ಕೊಲ್ಲಾಪೂರದ ಶಿಲಾಹಾರರು ಮುಂತಾದ ರಾಜರ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟಿದ್ದು ಕಂಡುಬರುತ್ತದೆ.

ಪ್ರಾಚೀನ ಶಿಲಾಶಾಸನಗಳಲ್ಲಿ ಉಲ್ಲೇಖಗೊಂಡ ಕಣಂಬಡೆ ಮುನ್ನೂರು ಎಂಬುದೇ ಈಗಿನ ಕನಮಡಿ ಎಂಬುದನ್ನು ಹಲವಾರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕೊಕಟನೂರ ಶಾಸನ, ತೆಲಸಂಗ ಶಾಸನ ಹಾಗೂ ಬಡಚಿ ಶಾಸನಗಳಲ್ಲಿ ಕಣಂಬಡೆ ಮುನ್ನೂರರ ಉಲ್ಲೇಖ ಬರುತ್ತದೆ. ಅಂದರೆ ಮುನ್ನೂರು ಹಳ್ಳಿಗಳನ್ನೊಳಗೊಂಡ ಪ್ರಾಂತ ಈಗಿನ ಕನಮಡಿಯು ಕಣಂಬಡೆ ಎಂಬುದಾಗಿತ್ತು ಎನ್ನುವುದು ತಿಳಿದುಬರುತ್ತದೆ.

ಕಣಂಬಡೆ ಮುನ್ನೂರು ವಲಯದಲ್ಲಿ ಹಲವಾರು ಉಪಘಟಕಗಳನ್ನು ಮಾಡಲಾಗಿತ್ತು. ಬಂಬರವಾಡಿ ಮೂವತ್ತು ತುಂಗಳ ಪೆನ್ನೆರಡು(ಮೂವತ್ತು) ಬಾಗೆ ನಾಲ್ವತ್ತು ಕೊಟ್ಟಿವಾಗೆ ಮೂವತ್ತು ಎಂಬ ನಾಲ್ಕು ಘಟಕಗಳಲ್ಲಿ ವಿಭಾಗಗೊಂಡು ಕಣಂಬಡೆ ಪ್ರಾಂತವಿರುವುದು ತಿಳಿದುಬರುತ್ತದೆ.

ಕಣಂಬಡೆ ಪ್ರಾಂತಕ್ಕೆ ಈಗಿನ ಕನಮಡಿಯೇ ಮುಖ್ಯ ಆಡಳಿತ ಕೇಂದ್ರವಾಗಿ ರೂಪಗೊಂಡಿತ್ತು. ಈಗಿನ ಕನಮಡಿಯಲ್ಲಿ ಕಂಡುಬರುವ ಕೆಲವು ಪ್ರಾಚೀನ ಸ್ಮಾರಕಗಳು ಇದಕ್ಕೆ ಪುಷ್ಟಿ ನೀಡುತ್ತವೆ. ಕನಮಡಿಯ ಹನುಮಂತದೇವರ ದೇವಾಲಯದ ಆವರಣದಲ್ಲಿ ದೊರೆಯುವ ಕೆಲವು ಭಗ್ನಗೊಂಡ ಶಿಲಾಮೂರ್ತಿಗಳು ವೀರಗಲ್ಲುಗಳಾಗಿವೆ. ಇವು ವೀರಯೋಧರ ಶಿಲಾವಿಗ್ರಹಗಳಾಗಿದ್ದು ಅಂದಿನ ಹೋರಾಟದ ದೃಶ್ಯಗಳನ್ನು ಒಳಗೊಂಡಿವೆ. ಕನಮಡಿಯ ಪಶ್ಚಿಮಕ್ಕೆ ಇರುವ ಕೆರೆಯ ತೂಬುಗಲ್ಲಿನ ಮೇಲ್ಭಾವಣಿಯಲ್ಲಿ ಕಂಡು ಬರುವ ಶಿಲಾಶಾಸನವು ಪ್ರಾಚೀನವಾಗಿದ್ದು ಇದು ಸಂಪೂರ್ಣವಾಗಿ ನಾಶವಾಗಿದೆ. ಇದರಲ್ಲಿಯ ಅಕ್ಷರಗಳು ಅಸ್ಪಷ್ಟವಾಗಿದ್ದು ಇದನ್ನು ಗುರುತಿಸಲು ಅಸಾಧ್ಯವಾಗಿದೆ. ಕನಮಡಿಯ ಪೂರ್ವಕ್ಕೆ ಇರುವ ಮರಡಿಯಲ್ಲಿ ಮಾಸ್ತಿಗಲ್ಲು ಇದ್ದು ಅದು ೪'೭" ಅಡಿ ಚೀರಾಕೃತಿಯ ಗದ್ದುಗೆಯ ಮೇಲೆ ಪ್ರತಿಷ್ಠಾಪಿಸಲಾಗಿದೆ.

ಈ ಎಲ್ಲ ಶಿಲಾಸ್ಮಾರಕಗಳನ್ನು ಗಮನಿಸಿದಾಗ ಕನಮಡಿಯು ಐತಿಹಾಸಿಕವಾಗಿ ಮಹತ್ವವನ್ನು ಪಡೆದುಕೊಂಡ ಕಣಂಬಡೆಯೇ ಆಗಿರಬಹುದೆಂಬುದು ಸ್ಪಷ್ಟವಾಗುತ್ತದೆ. ಈ ಪ್ರದೇಶದಲ್ಲಿ ಐತಿಹಾಸಿಕ ಉತ್ಖನನ ನಡೆದರೆ ಇದರ ಬಗೆಗೆ ಹೆಚ್ಚಿನ ಸತ್ಯಾಂಶಗಳು ದೊರೆಯುವ ಸಾಧ್ಯತೆಗಳಿವೆ.

ಮುಚ್ಚಂಡಿ–ದರಿದೇವರ ದೇವಾಲಯವು ಮೂಲತಃ ಮುಚ್ಚಂಡಿ ಗ್ರಾಮಕ್ಕೆ ಸಂಬಂಧಿಸಿದ್ದಾಗಿದೆ. ಕನಮಡಿ ಮತ್ತು ಮುಚ್ಚಂಡಿ ಎರಡೂ ಗ್ರಾಮಗಳ ಮಧ್ಯದಲ್ಲಿ ದರಿದೇವರ ದೇವಾಲಯವಿದೆ. ಆದರೆ ಭಾಷಾವಾರು ಪ್ರಾಂತ ರಚನೆಯಾದ ಮೇಲೆ ಮುಚ್ಚಂಡಿಯು ಮಹಾರಾಷ್ಟ್ರಕ್ಕೆ ಸೇರಿತು. ದರಿದೇವರ

ದೇವಾಲಯವು ಕರ್ನಾಟಕದ ಸೀಮೆಯೊಳಗೆ ಉಳಿದಿದ್ದರಿಂದ ಕನಮಡಿಯ ಗ್ರಾಮಕ್ಕೆ ದರಿದೇವರ ದೇವಾಲಯವು ಸೇರಲ್ಪಟ್ಟಿತು. ಈಗಲೂ ಮುಚ್ಚಂಡಿ ದರಿದೇವರು ಎಂದೇ ಗುರುತಿಸಲ್ಪಡುತ್ತದೆ. ಧರಿದೇವರ ಗುರುಗಳಾದ ಶ್ರೀ ಶಂಕರ ಲಿಂಗದೇವರು ಹಾಗೂ ಬ್ರಹ್ಮಾನಂದ ಶ್ರೀಗಳ ದೇವಾಲಯಗಳು ಮುಚ್ಚಂಡಿಯಲ್ಲಿಯೇ ಇರುತ್ತವೆ.[೧]

**ದರಿಕೊಳ್ಳ** : ದರಿದೇವರ ಬೃಹತ್ ದೇವಾಲಯವಿರುವುದು ದರಿಕೊಳ್ಳಲದಲ್ಲಿ ಧರಿಕೊಳ್ಳವು ಕನಮಡಿ ಹಾಗೂ ಮುಚ್ಚಂಡಿ ಗ್ರಾಮಗಳ ಮಧ್ಯದಲ್ಲಿ ಇಳಿಜಾರಾದ ಚಿಕ್ಕ ಚಿಕ್ಕ ಗುಡ್ಡಗಳಿಂದ ಕೂಡಿದೆ. ಭೋರನದಿಯು ಈ ಗುಡ್ಡವನ್ನು ಸೀಳಿ ಎರಡು ಭಾಗಗಳಾಗಿಸಿ ಸಾಗಿದೆ. ಈ ಭೋರನದಿಯ ಒಂದು ಬದಿಯ ಭಾಗದಲ್ಲಿಯೇ ಈ ದರಿದೇವರ ದೇವಾಲಯವು ನಿರ್ಮಾಣಗೊಂಡಿದೆ. ಧರಿಕೊಳ್ಳವು ಧರಿದೇವರ ತಪಸ್ಸಿನಿಂದ ಪಾವನ ಕ್ಷೇತ್ರವಾಗಿದೆ ಎಂಬುದು ಇಲ್ಲಿಯ ಜನರ ನಂಬಿಕೆಯಾಗಿದೆ. ಈ ದರಿಕೊಳ್ಳದಲ್ಲಿಯೇ ದರಿದೇವರು ಐಕ್ಯರಾಗಿದ್ದು ಅಲ್ಲಿಯೇ ದೇವಾಲಯವು ನಿರ್ಮಿಸಲಾಗಿದೆ ಎಂದು ಹೇಳಲಾಗುತ್ತದೆ. ದರಿದೇವರ ಜೀವನಕ್ಕೆ ಸಂಬಂಧಪಟ್ಟ ಹಲವಾರು ಕುರುಹುಗಳು ಈ ಗುಡ್ಡದ ಬೇರೆ ಬೇರೆ ಭಾಗಗಳಲ್ಲಿ ಕಂಡುಬರುತ್ತವೆ.

**ತುಪ್ಪಹಟ್ಟಿ** : ಸ್ಥಳೀಯ ಐತಿಹ್ಯದ ಪ್ರಕಾರ ತುಪ್ಪಹಟ್ಟಿಯು ದರಿದೇವರ ಹುಟ್ಟಿದ ಊರು. ಅಲ್ಲದೆ ತುಪ್ಪದಟ್ಟಿಯ ರಾಜ. ಇಂದು ಈ ಗ್ರಾಮವು ಸಂಪೂರ್ಣವಾಗಿ ಹಾಳಾಗಿದೆ. ಗ್ರಾಮ ಇದ್ದಿರಬಹುದಾದ ಕೆಲವು ಕುರುಗಳು ಅಲ್ಲಲ್ಲಿ ಕಂಡುಬರುತ್ತದೆ. ಹಾಳು ಬಿದ್ದ ಮನೆಯ ಅವಶೇಷಗಳು, ದೇವಾಲಯದ ಕೆಲವು ಭಾಗಗಳು ಇಲ್ಲಿ ಕಂಡುಬರುತ್ತವೆ. ಆದರೆ ಐತಿಹಾಸಿಕವಾಗಿ ಈ ಊರಿನ ಉಲ್ಲೇಖ ಎಲ್ಲಿಯೂ ಕಂಡುಬರುವುದಿಲ್ಲ.

ತುಪ್ಪಹಟ್ಟಿಯು ದರಿಕೊಳ್ಳ ದರಿದೇವರ ದೇವಾಲಯ ಹಾಗೂ ಮುಚ್ಚಂಡಿ ಗ್ರಾಮಗಳ ಮಧ್ಯದಲ್ಲಿದೆ. ಇದರ ಪಕ್ಕದಲ್ಲಿಯೇ ಭೋರನದಿಯು ಹರಿದಿದೆ. ಒಂದು ಕಾಲದಲ್ಲಿ ಇದು ರಾಜಧಾನಿಯಾಗಿದ್ದು ಇಲ್ಲಿಯೇ ದರಿದೇವರು ರಾಜರಾಗಿ ಆಳ್ವಿಕೆ ನಡೆಸಿದರು. ಎನ್ನುವ ನಂಬಿಕೆಗಳು ಕಂಡುಬರುತ್ತವೆ. ಅಲ್ಲದೆ ತುಪ್ಪಹಟ್ಟಿಯು ತುಪ್ಪವನ್ನು ಮಾರಾಟ ಮಾಡುವ ಪ್ರಮುಖ ವ್ಯಾಪಾರಿ ಕೇಂದ್ರವೂ ಆಗಿದ್ದು, ಅದರಿಂದಾಗಿಯೇ

---

೧. ಬೀಳೂರಿನ ಗುರು ಬಸವ ಗುರುಗಳು ಶ್ರೀ ಬ್ರಹ್ಮಾನಂದ ಶ್ರೀಗಳ ಸಮಾಧಿಯು ಮುಚ್ಚಂಡಿಯಲ್ಲಿದೆ ಎಂಬುದನ್ನು ಶೋಧಿಸಿದರು. ಈಗ ಅಲ್ಲಿ ಒಂದು ಚಿಕ್ಕದಾದ ದೇವಾಲಯವನ್ನು ಕಟ್ಟಿಸಿದರು. ಇದು ಮುಚ್ಚಂಡಿಯ ಗ್ರಾಮದ ಪ್ರಮುಖ ದೇವಾಲಯವಾಗಿದೆ.

ಈ ಗ್ರಾಮಕ್ಕೆ ತುಪ್ಪಹಟ್ಟಿ ಎಂಬ ಹೆಸರು ಬರಲು ಕಾರಣವಾಯಿತು.[೨] ತುಪ್ಪಹಟ್ಟಿಯ ಸುತ್ತಮುತ್ತಲೆಲ್ಲ ಕಾಡು ಆವರಿಸಿದ್ದು ಇಲ್ಲಿ ದನಕರುಗಳಿಗೆ ಬೇಕಾದ ಹುಲ್ಲು ಹೆಚ್ಚಾಗಿ ಸಿಗುವುದರಿಂದ ತುಪ್ಪಹಟ್ಟಿಯ ಜನರ ಮುಖ್ಯ ಉದ್ಯೋಗ ಕಸುಬು ಹೈನುಗಾರಿಕೆಯೇ ಆಗಿತ್ತು. ಹೀಗಾಗಿಯೇ ಈ ನಗರಕ್ಕೆ ತುಪ್ಪಹಟ್ಟಿ ಎಂಬ ಹೆಸರು ಬಂದಿದೆ ಎಂದು ನಂಬಲಾಗಿದೆ.

ತುಪ್ಪಹಟ್ಟಿಯು ನಾಶವಾಗಲು ಮುಖ್ಯ ಕಾರಣ ಬರಗಾಲ ಇದ್ದಿರಬಹುದಾಗಿದೆ. ಏಕೆಂದರೆ ಈ ಊರಿನ ಸುತ್ತಮುತ್ತಲಿನ ಹಲವಾರು ಊರುಗಳು ಬರಗಾಲದ ಪರಿಣಾಮದಿಂದಾಗಿಯೇ ನಾಶವಾಗಿರುವುದನ್ನು ಸ್ಥಳೀಯರು ಹೇಳುತ್ತಾರೆ. ಇಂದಿಗೂ ಬಲನಟ್ಟಿ, ಒಂಟಿಹಟ್ಟಿ, ಗುರ್ಲಟ್ಟಿ ಮುಂತಾದ ಊರುಗಳ ಹೆಸರುಗಳನ್ನೊಳಗೊಂಡ ಹೊಲಗಳನ್ನು ಗುರುತಿಸಬಹುದಾಗಿದೆ. ಈ ಊರುಗಳು ನಾಶವಾದ ಬಳಿಕ ಅಲ್ಲಿ ಊಳಿಮೆಯನ್ನು ಕೈಕೊಂಡು ಆ ಊರಿನ ಹೆಸರಿನೊಂದಿಗೆ ಅವುಗಳನ್ನು ಗುರುತಿಸಲಾಗುತ್ತದೆ. ಒಟ್ಟಿನಲ್ಲಿ ತುಪ್ಪಹಟ್ಟಿಯು ಸ್ಥಳೀಯ ಜನಪದ ಕಾವ್ಯಗಳಲ್ಲಿ ಒಂದು ರಾಜಧಾನಿಯಾಗಿ ಕಂಗೊಳಿಸಿದೆ. ಇಲ್ಲಿಯ ಕುರುಹುಗಳು ಈ ಊರಿನ ಅಸ್ತಿತ್ವವನ್ನು ಎತ್ತಿ ಹೇಳಲು ಸಹಕಾರಿಯಾಗಿವೆ.



---

೨. ಮ.ಸಿ. ಕುಂಬಾರ: ಶ್ರೀ ದರಿದೇವರ ಚರಿತ್ರೆ, ಪು: ೧೦.

## ಅಧ್ಯಾಯ : ಮೂರು

# ಶ್ರೀ ದರಿದೇವರ ಚರಿತ್ರೆ

ಶ್ರೀ ದರಿದೇವರ ಜೀವನ ಚಿತ್ರಣವನ್ನು ತಿಳಿಸುವ ಯಾವ ಕಾವ್ಯಗಳು, ಆಕರಗಳು ಇದುವರೆಗೆ ಲಭ್ಯವಾಗಿಲ್ಲ. ಆದರೆ ಶ್ರೀ ದರಿದೇವರ ಜೀವನ-ಸಾಧನೆಗಳನ್ನು ಹೇಳುವ ಹಲವಾರು ಕತೆಗಳು, ಜಾನಪದ ಕಾವ್ಯಗಳು, ಸ್ತುತಿಗಳಲ್ಲಿ ತುಂಬಿಕೊಂಡಿದೆ. ಈ ಎಲ್ಲ ಆಕರಗಳಿಂದ ಶ್ರೀ ದರಿದೇವರ ಚರಿತ್ರೆಯನ್ನು ಈ ಕೆಳಗಿನಂತೆ ನಿರೂಪಿಸಲಾಗಿದೆ.

**ಪೌರಾಣಿಕ ಹಿನ್ನೆಲೆ:**

ಕೈಲಾಸದಲ್ಲಿ ಪರಶಿವನು ಪಾರ್ವತಿಯೊಡನೆ ಸಿಂಹಾಸನದ ಮೇಲೆ ಆಸೀನನಾಗಿ ಕುಳಿತಿದ್ದನು. ಆಗ ಪರಶಿವನ ಸುತ್ತಲೂ ಎಲ್ಲ ದೇವಾನುದೇವತೆಗಳು, ರುದ್ರಗಣಂಗಳು, ಸಪ್ತ ಋಷಿಗಳು, ಯಕ್ಷ-ಕಿನ್ನರರು ಮುಂತಾದವರೆಲ್ಲರು ಸೇರಿ ಶಿವ-ಪಾರ್ವತಿಯರ ಸ್ತುತಿಯನ್ನು ಮಾಡುತ್ತಿದ್ದರು. ಆ ಸಮಯದಲ್ಲಿ ಶಿವಗಣಗಳಲ್ಲಿ ಪ್ರಮುಖರೆನಿಸಿದ ಭೈರವನು ಮಹಾದೇವನ ದರ್ಶನಕ್ಕಾಗಿ ಬರುತ್ತಿರುವಾಗ ತನಗರಿವಿಲ್ಲದಂತೆಯೇ ಪರಶಿವನ ಅಲಂಕಾರಕ್ಕಾಗಿ ತಂದಿಟ್ಟ ಫಲ, ಪುಷ್ಪದ ತಟ್ಟೆಯಲ್ಲಿ ಕಾಲಿಟ್ಟನು. ಇದನ್ನು ನೋಡಿದ ಸಪ್ತರ್ಷಿಗಳು ಪರಶಿವನ ಪೂಜೆಯು ಅಪವಿತ್ರವಾಯಿತೆಂದು ಕೋಪಗೊಂಡರು. ಆಗ ಋಷಿಗಳು "ಎಲೈ ಭೈರವನೇ ಪರಮೇಶ್ವರ ಪೂಜೆಗಾಗಿ ತಂದಿಟ್ಟ ಫಲಪುಷ್ಪಗಳನ್ನು ತುಳಿದು ಅಪವಿತ್ರಗೊಳಿಸಿದೆ; ಇದು ಮಹಾಪರಾಧ. ನೀನು ಪಾಪ ಮಾಡಿದೆ. ಅದಕ್ಕಾಗಿ ಈ ಪಾಪದ ಪ್ರಾಯಶ್ಚಿತ್ತವಾಗಿ ನೀನು ಭೂಲೋಕದಲ್ಲಿ ಮಾನವನಾಗಿ ಜನಿಸು" ಎಂದು ಶಾಪವನ್ನು ನೀಡಿದರು. ಇದರಿಂದ ಭಯಭೀತನಾದ ಭೈರವನು ನನ್ನಿಂದ ಆದ ಅಪರಾಧವು ನನಗರಿವಿಲ್ಲದೆಯೇ ನಡೆದಿದೆ. ಆದರೂ ನಾನು ಮಾಡಿದ್ದು

ಮಹಾಪರಾಧವೇ ಆಗಿದೆ. ಆದರೆ ನನಗೆ ಮಾನವಜನ್ಮದಿಂದ ಮುಕ್ತಿಯನ್ನು ಹೊಂದುವ ಉಪಾಯವನ್ನು ಹೇಳಿ ಎಂದು ಬೇಡಿಕೊಂಡನು. ಆಗ ಋಷಿಗಳು ನೀನು ಶಾಪ ವಿಮೋಚನೆಯನ್ನು ಹೊಂದಬೇಕಾದರೆ ಭೂಲೋಕದಲ್ಲಿ ಮಾನವನಾಗಿ ಜನಿಸಿ ಭಕ್ತಿಯಿಂದ ಪರಶಿವನ ಪೂಜೆಯನ್ನು ಮಾಡು, ಆಗ ನಿನ್ನ ಶಾಪ ವಿಮೋಚನೆಯಾಗಿ ನೀನು ಮತ್ತೆ ಕೈಲಾಸದಲ್ಲಿ ನಿನ್ನ ಸ್ಥಾನವನ್ನು ಪಡೆಯುವೆ ಎಂದು ಹೇಳಿದರು. ಆದರೆ ಇದರಿಂದ ತೃಪ್ತನಾಗದ ಭೈರವನು ಪರಶಿವನಲ್ಲಿ ತನಗೆ ಒದಗಿದ ಶಾಪವನ್ನು ಮುಕ್ತಗೊಳಿಸುವಂತೆ ಬೇಡಿಕೊಂಡನು. ಆಗ ಪರಶಿವನು ಎಲೈ ಭೈರವನೇ ಋಷಿಮುನಿಗಳು ನೀಡಿದ ಶಾಪವನ್ನು ಹಿಂಪಡೆಯಲು ಸಾಧ್ಯವಿಲ್ಲ. ಅದನ್ನು ನೀನು ಅನುಭವಿಸಲೇಬೇಕು. ಅಲ್ಲದೆ ಇದು ನೆಪ ಮಾತ್ರ. ನೀನು ಭೂಲೋಕದಲ್ಲಿ ಮಾನವನಾಗಿ ಜನಿಸುವುದು ಈಗ ಅಗತ್ಯವಾಗಿದೆ. ನಿನ್ನಿಂದ ಅನೇಕ ಮಹಾಕಾರ್ಯಗಳು ಜರುಗಬೇಕಿದೆ. ದುಷ್ಟ ಸಂಹಾರ ಮಾಡಿ ಶಿಷ್ಯರನ್ನು ರಕ್ಷಿಸುವ ಕಾರ್ಯ ನಿನ್ನಿಂದ ನಡೆಯಬೇಕಿದೆ. ನನ್ನ ಕೃಪಾದೃಷ್ಟಿ ನಿನ್ನ ಮೇಲಿದೆ. ಅಲ್ಲದೆ ಆದಿಶಕ್ತಿಯಾದ ಪಾರ್ವತಿಯೂ ನಿನಗೆ ಸಹೋದರಿಯಾಗಿ ಜನಿಸಿ ನಿನ್ನ ಜೊತೆಗಿರುವಳು. ಅದಕ್ಕಾಗಿ ನೀನು ಚಿಂತಿಸುವ ಅಗತ್ಯವಿಲ್ಲ ಎಂದು ಹೇಳಿ ಹರಸಿದನು. ಅದರಂತೆ ಶ್ರೀ ಭೈರವನು ಭೂಲೋಕದಲ್ಲಿ ದರಿದೇವರಾಗಿ ಹಾಗೂ ಆದಿಶಕ್ತಿ ಪಾರ್ವತಿಯು ದರಿದೇವರ ಸಹೋದರಿಯಾಗಿ ಜಕ್ಕಮ್ಮದೇವಿ ಎಂಬ ಹೆಸರಿನಿಂದ ಅವತರಿಸಿದರು.

ಈ ಕಥೆಯು ಪೌರಾಣಿಕವಾಗಿರುವ ುದರಿಂದ ಇದಕ್ಕೆ ಯಾವುದೇ ಪುರಾವೆಗಳು ಲಭ್ಯವಿಲ್ಲ. ಆದರೆ ಈ ಕಥೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ದರಿದೇವರ ಮಹಿಮೆಯನ್ನು ತಿಳಿಸಲಾಗುತ್ತದೆ. ಮಹಾಪುರುಷರ ಜನನವನ್ನು ದೇವಲೋಕಕ್ಕೆ ಹಿನ್ನೆಲೆಯಾಗಿಟ್ಟುಕೊಂಡು ತಿಳಿಸುವುದು ಭಾರತೀಯ ಪುರಾಣಗಳಲ್ಲಿ ಬೆಳೆದು ಬಂದಿದೆ. ಅದರಂತೆ ದರಿದೇವರ ಜನನದ ಹಿನ್ನೆಲೆಯನ್ನು ಈ ದೃಷ್ಟಿಯಲ್ಲಿ ಚಿತ್ರಿಸಲಾಗಿದೆ.

**ದಂತ ಕಥೆಗಳು:**

ಶ್ರೀ ದರಿದೇವರ ಜೀವನದ ಚರಿತ್ರೆಯನ್ನು ತಿಳಿಸುವ ಯಾವ ಕೃತಿಗಳು ಇದುವರೆಗೆ ಲಭ್ಯವಾಗಿಲ್ಲ. ಆದರೆ ಆತನ ಜೀವನವನ್ನು ತಿಳಿಸುವ ಕತೆಗಳು ಭಕ್ತರ ಬಾಯಲ್ಲಿ ಉಳಿದುಕೊಂಡಿವೆ. ಈ ಕತೆಗಳಲ್ಲಿ ದರಿದೇವರನ್ನೂ ಚಾರಿತ್ರಿಕ ವ್ಯಕ್ತಿಯನ್ನಾಗಿ ಚಿತ್ರಿಸಿದ್ದರೂ ಕೂಡ ಇತಿಹಾಸಕ್ಕೂ ಈತನ ಜೀವನಕ್ಕೂ ಯಾವುದೇ ಸಾಮ್ಯತೆಗಳು ಕಂಡುಬರುವುದಿಲ್ಲ. ಆದರೂ ದರಿದೇವರು ಎನ್ನುವ ಮಹಾಪುರುಷನು ತನ್ನ ಮಹಿಮೆಯಿಂದ ಈ ಪ್ರದೇಶದ ಆರಾಧ್ಯ ದೈವವಾಗಿದ್ದು ಸ್ಪಷ್ಟವಾಗಿದೆ. ದರಿದೇವರ ಜೀವನವನ್ನು ತಿಳಿಸುವ ಹಲವಾರು ಕತೆಗಳು ಇಂದಿಗೂ ಜನರ ನಾಲಿಗೆಯ ಮೇಲೆ ಉಳಿದುಕೊಂಡು ಬಂದಿದೆ. ಈ ಕತೆಗಳಲ್ಲಿ ಬರುವ ವಿಷಯಗಳಿಗೆ ಸಾಕ್ಷಿಯಾಗಿ ಹಲವಾರು ಕುರುಹುಗಳು ಇಂದಿಗೂ ಉಳಿದುಕೊಂಡು

ಬಂದಿವೆ. ಈ ಎಲ್ಲ ಹಿನ್ನೆಲೆಯಲ್ಲಿ ಶ್ರೀ ದರಿದೇವರ ಜೀವನವನ್ನು ಈ ಕೆಳಗಿನಂತೆ ಚಿತ್ರಿಸಬಹುದಾಗಿದೆ.

**ಜನನ-ಬಾಲ್ಯ-ಶಿಕ್ಷಣ:**

'ತುಪ್ಪದಟ್ಟಿ' ಎನ್ನುವ ಪ್ರಾಂತ್ಯವನ್ನು ಸಾತ್ವಿಕ ರಾಜನು ಆಳುತ್ತಿದ್ದನು. ಈತನ ಮಡದಿ 'ಸುಶೀಲರಾಣಿ'. ರಾಜನು ಹೆಸರಿಗೆ ತಕ್ಕಂತೆ ಸಾತ್ವಿಕ ಗುಣಸಂಪನ್ನನಾಗಿದ್ದನು. ಈತನ ಮಡದಿಯೂ ಪತಿಗೆ ಅಧೀನಳಾಗಿ ಉತ್ತಮ ಗುಣಸಂಪನ್ನೆಯಾಗಿ ಪ್ರಜಾಪ್ರಿಯರಾಗಿ ರಾಜ್ಯಪಾಲನೆಯನ್ನು ದಂಪತಿಗಳಿಬ್ಬರೂ ಮಾಡುತ್ತಿದ್ದರು. ಇವರ ಉತ್ತಮವಾದ ಆಡಳಿತದಿಂದ ತುಪದಟ್ಟಿಯು ಸಂಪದ್ಭರಿತ. ಸುಖ ಶಾಂತಿಯ ರಾಜ್ಯವಾಗಿತ್ತು. (ತುಪ್ಪದಟ್ಟಿಯ ಪರಿಚಯವನ್ನು ಭೌಗೋಳಿಕ ಹಿನ್ನೆಲೆಯಲ್ಲಿ ವಿವರಿಸಲಾಗಿದೆ). ಆದರೆ ಇವರಿಗೆ ಇರುವ ಒಂದೇ ಒಂದು ಕೊರತೆಯೆಂದರೆ ಮಕ್ಕಳಾಗದಿರುವುದು. ಈ ತಮ್ಮ ಕೊರಗನ್ನು ಕುಲಗುರುಗಳಾದ ಶ್ರೀ ಬ್ರಹ್ಮಾನಂದ ಸ್ವಾಮಿಗಳ ಹತ್ತಿರ ಹೇಳಿಕೊಂಡರು. ಆಗ ಅವರು ವರದ ಶಂಕರ ಪೂಜೆಯನ್ನು ಮಾಡುವಂತೆ ಸಲಹೆ ನೀಡಿದರು. ಅದರಂತೆ ದಂಪತಿಗಳಿಬ್ಬರೂ ಪರಶಿವನ ಪೂಜೆಯನ್ನು ಭಕ್ತಿ ನಿಷ್ಠೆಯಿಂದ ಕೈಕೊಂಡರು. ಇದರಿಂದ ರಾಜದಂಪತಿಗಳಿಗೆ ಸಂತಾನ ಭಾಗ್ಯ ಪ್ರಾಪ್ತವಾಯಿತು. ಸುಶೀಲರಾಣಿಯು ಗಂಡು ಮಗುವಿಗೆ ಜನ್ಮವನ್ನು ನೀಡಿದರು. ಈಶ್ವರನ ಪೂಜೆಯಿಂದ ಮಗು ಜನಿಸಿದ್ದರಿಂದ ಮಗುವಿಗೆ ಈಶ್ವರನೆಂದೇ ಹೆಸರಿಡಲಾಯಿತು. ಈ ಮಗುವೇ ಮುಂದೆ ದರಿದೇವನಾಗಿ ದರಿಕೊಳ್ಳದಲ್ಲಿ ನೆಲೆಸಿದನು.

ಈಶ್ವರನು ಜನಿಸಿದ ನಾಲ್ಕು ವರ್ಷಕ್ಕೆ ಸುಶೀಲರಾಣಿಯು ಹೆಣ್ಣು ಮಗುವೊಂದನ್ನು ಹೆತ್ತಳು. ಅವಳೇ ಜಕ್ಕಮ್ಮದೇವಿಯಾಗಿ ಪೂಜೆಗೊಳ್ಳುತ್ತಿರುವಳು.

ಈ ಇಬ್ಬರು ಅಣ್ಣ-ತಂಗಿಯರ ಶಿಕ್ಷಣವು ತುಪ್ಪದಟ್ಟಿ, ಮುಚ್ಚಂಡಿಯಲ್ಲಿ ನಡೆಯಿತು. ತುಪ್ಪದಟ್ಟಿಯ ಮಠದ ಗುರುಗಳಾದ ಶ್ರೀ ಶಿವಲಿಂಗ ಸ್ವಾಮಿಗಳು ಮಕ್ಕಳಿಬ್ಬರಿಗೂ ಯೋಗ, ಶಾಸ್ತ್ರಗಳನ್ನು ಕಲಿಸಿದರೆ, ಶ್ರೀ ಶಂಕರಾನಂದ ಸ್ವಾಮಿಗಳು ಮಲಕಂಬ, ಧನುರ್ವಿದ್ಯೆಗಳನ್ನು ಕಲಿಸಿದರು. ಇದರಿಂದ ಈಶ್ವರನು ಯೌವನಾವಸ್ಥೆಗೆ ಬರುವ ಹೊತ್ತಿಗೆ ಒಬ್ಬ ಶೂರ ಯೋಧನಂತೆ ತರಬೇತಿಯನ್ನು ಹೊಂದಿದನು. ಕಾಡಿನಲ್ಲಿಯ ಕ್ರೂರ ಪ್ರಾಣಿಗಳನ್ನು ಬೇಟೆಯಾಡಿ ಜನರ ತೊಂದರೆಗಳನ್ನು ನಿವಾರಿಸಿ ಜನರ ಪ್ರೀತಿಗೆ ಪಾತ್ರನಾದನು. ಅಲ್ಲದೆ ಈತನು ಕಲೆತ ವಿದ್ಯಾಶಾಲೆಯ ಶ್ರೀ ಶಂಕರಲಿಂಗ ಸ್ವಾಮಿಗಳು ವ್ಯಾಯಾಮ ಶಾಲೆಯ ಸಂಪೂರ್ಣ ಹೊಣೆಯನ್ನು ಈಶ್ವರನಿಗೆ ಒಪ್ಪಿಸಿ ದೈವಾಧೀನರಾದರು. ಮುಂದೆ ಈಶ್ವರನು ತನ್ನಂತೆಯೇ ಶೂರರಾದ ಯುವಕರ ಪಡೆಯೊಂದನ್ನು ಕಟ್ಟಿಕೊಂಡು ಅವರೆಲ್ಲರಿಗೂ ಉತ್ತಮವಾದ ತರಬೇತಿಯನ್ನು ನೀಡಿ ನಾಡಿನ ಹಿತ ಕಾರ್ಯಗಳಲ್ಲಿ ನಿರತನಾದನು.

ಈಶ್ವರನು ತುಪ್ಪದಟ್ಟಿಯನ್ನು ತೊರೆದು ಮುಚ್ಚಂಡಿಯಲ್ಲಿಯೇ ತನ್ನ ತಂಗಿಯ ಜೊತೆಗೆ ವಾಸಮಾಡತೊಡಗಿದನು. ಮುಚ್ಚಂಡಿಯಲ್ಲಿ ನೆಲೆಸಲು ಕಾರಣ ಬಹುಶಃ ತುಪ್ಪದಟ್ಟಿಯು ತೀವ್ರ ಬರಗಾಲಕ್ಕೆ

ತುತ್ತಾಗಿರಬಹುದಾಗಿದೆ. ಈ ಹಂತದಲ್ಲಿಯೇ ತುಪ್ಪದಟ್ಟಿಯು ನಾಶವಾಗಿರುವ ಸಾಧ್ಯತೆಗಳು ಕಂಡು ಬರುತ್ತವೆ. ಈಶ್ವರನು ಯೌವನಾವಸ್ಥೆಗೆ ಬಂದ ಸಂದರ್ಭದಲ್ಲಿಯೇ ತನ್ನ ತಂದೆ ತಾಯಿಗಳನ್ನು ಕಳೆದುಕೊಂಡು ಮುಚ್ಚಂಡಿಯಲ್ಲಿ ಬಂದು ನೆಲೆಸಿದನೆಂಬುದನ್ನು ಊಹಿಸಬಹುದಾಗಿದೆ.

ಈಶ್ವರನು ಮುಚ್ಚಂಡಿಯಲ್ಲಿ ಬಂದು ನೆಲೆಸಿದ ಮೇಲೆ ಗ್ರಾಮದ ಜನರಿಗೆ ಕಾಡುಪ್ರಾಣಿಗಳಿಂದ ತೊಂದರೆ ತಪ್ಪಿತು. ಮುಚ್ಚಂಡಿಯು ಅಂದು ಗುಡ್ಡ, ಕಣಿವೆಗಳಿಂದ ಆವೃತ್ತವಾಗಿ ಭಯಂಕರ ಕಾಡು ಪ್ರಾಣಿಗಳಿಂದ ತುಂಬಿತ್ತು. ದಟ್ಟವಾದ ಅರಣ್ಯದಲ್ಲಿ ರಟ್ಟಗಳ್ಳಿ, ಜಾಲಿ, ಬೇವು, ಹುಣಸೆ, ತಾಡು, ಈಚಲಮರ ಮೊದಲಾದ ಗಿಡಗಂಟಿಗಳಿಂದ ತುಂಬಿಕೊಂಡಿತ್ತು. ಈ ಕಾಡಿನಲ್ಲಿಯ ಕ್ರೂರ ಪ್ರಾಣಿಗಳಾದ ಹುಲಿ, ಸಿಂಹ, ಚಿರತೆ, ಕಾಡು ಹಂದಿ ಮುಂತಾದವುಗಳು ಇಲ್ಲಿಯ ಜನರಿಗೆ ತೊಂದರೆಗಳನ್ನು ನೀಡುತ್ತಿದ್ದವು. ಆಗಾಗ ಜನರ ಮೇಲೆ ಎರಗಿ ಪ್ರಾಣ ಹಾನಿಗಳನ್ನು ಮಾಡುತ್ತಿದ್ದವು. ಇವುಗಳ ತೊಂದರೆಯನ್ನು ತಪ್ಪಿಸಲು ವೀರ ಯುವಕರು ಬೇಟೆಗೆ ಹೋಗುವುದು ಅವುಗಳನ್ನು ಕೊಲ್ಲುವುದು ನಿರಂತರವಾಗಿ ನಡೆದೇ ಇತ್ತು. ಈಶ್ವರನು ಬೇಟೆ ಆಡುವುದರಲ್ಲಿ ಪಳಗಿದವನಾಗಿದ್ದನು. ತನ್ನ ಶಕ್ತಿ ಸಾಮರ್ಥ್ಯದಿಂದ ಎಂತಹ ಬಲಿಷ್ಠ ಪ್ರಾಣಿಯನ್ನೂ ಬೇಟೆಯಾಡುವ ಶಕ್ತಿಯನ್ನು ಹೊಂದಿದ್ದನು. ಅಲ್ಲದೆ ತನ್ನಂತೆಯೇ ಆಸಕ್ತರಾದ ಯುವಕರ ಪಡೆಯನ್ನು ಕಟ್ಟಿಕೊಂಡು ಅವರೆಲ್ಲರಿಗೂ ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿಸಿ ತರಬೇತಿಗೊಳಿಸಿ ಕಾಡಿನಲ್ಲಿ ಬೇಟೆಯಾಡುವುದೇ ಈಶ್ವರನ ದಿನನಿತ್ಯದ ಕಾಯಕವಾಯಿತು. ಹೀಗಾಗಿ ಈ ಭಾಗದ ಜನರಿಗೆ ಈಶ್ವರನು ಪ್ರಾಣ ರಕ್ಷಕನಾದನು. ಜನರಿಗೆ ಎದುರಾದ ತೊಂದರೆಗಳನ್ನು ಕಷ್ಟಗಳನ್ನು ನಿವಾರಿಸತೊಡಗಿದನು.

**ಮಲ್ಲಯ್ಯ ಅರಸನೊಂದಿಗೆ ಸ್ನೇಹ:**

ದೇವರ ಹಿಪ್ಪರಗಿಯಲ್ಲಿ ಮಲ್ಲಯ್ಯನೆಂಬ ರಾಜನು ಆಳುತ್ತಿದ್ದನು. ಒಂದು ದಿನ ಈತನು ಬೇಟೆಗಾಗಿ ಕಾಡನ್ನು ಸುತ್ತುತ್ತ ಮುಚ್ಚಂಡಿ ಗುಡ್ಡದ ಹತ್ತಿರ ಬರುತ್ತಾನೆ. ಅಲ್ಲಿ ಈಶ್ವರನಿಗೂ ಈತನಿಗೂ ಪರಿಚಯವಾಗಿ ಇಬ್ಬರೂ ಆತ್ಮೀಯ ಸ್ನೇಹಿತರಾಗುತ್ತಾರೆ. ಅತ್ಯಂತ ಪ್ರೀತಿ ಆದರಗಳಿಂದ ಮಲ್ಲಯ್ಯನನ್ನು ಉಪಚರಿಸಿ ಇಬ್ಬರು ಸೇರಿ ಬೇಟೆಯಾಡುತ್ತಾರೆ. ಯುದ್ಧದ ವಿವಿಧ ಕಲೆಗಳನ್ನು ಇಬ್ಬರೂ ಸೇರಿ ಚರ್ಚಿಸುತ್ತಾರೆ. ಹೊಸ ಹೊಸ ಯುದ್ಧ ಕಲೆಗಳನ್ನು ಒಬ್ಬರಿಗೊಬ್ಬರು ಕಲಿಸುತ್ತಾರೆ. ಹೀಗೆ ಇವರಿಬ್ಬರಲ್ಲಿಯೂ ಅತ್ಯಂತ ಆತ್ಮೀಯವಾದ ಸ್ನೇಹ ಸಂಬಂಧ ಬೆಳೆಯುತ್ತದೆ. ಇಬ್ಬರೂ ಸೇರಿ ಕಾಡಿನಲ್ಲಿ ಬೇಟೆಯಾಡುವ ಸಂದರ್ಭದಲ್ಲಿ ಮಲ್ಲಯ್ಯನ ಮೇಲೆ ಹುಲಿ ಏರಿ ಬರುತ್ತದೆ. ಆಗ ಈಶ್ವರನು ಹುಲಿಯನ್ನು ಹೊಡೆದುರುಳಿಸಿ ಸ್ನೇಹಿತನ ಪ್ರಾಣವನ್ನು ರಕ್ಷಿಸುತ್ತಾನೆ. ಇದರಿಂದ ಇವರಿಬ್ಬರ ಮಧ್ಯದಲ್ಲಿ ಸ್ನೇಹ ಮತ್ತಷ್ಟು ಗಾಢವಾಗುತ್ತದೆ. ಬೇಟೆಯನ್ನು ಮುಗಿಸಿ ಇಬ್ಬರೂ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿ ಬರುತ್ತಾರೆ.

ಮಲ್ಲಯ್ಯನು ತನ್ನ ರಾಜ್ಯವಾದ ಮಾದನ ಹಿಪ್ಪರಿಗಿಗೆ ಹಿಂದಿರುಗಿ, ರಾಣಿಯರ ಮುಂದೆ ಈಶ್ವರನ ಗುಣಗಾನವನ್ನು ಮಾಡಿ ಆತನಿಂದಲೇ ತಾನು ಬದುಕಿ ಹಿಂದುರುಗಿದೆ ಎಂದು ನಡೆದ

ವೃತ್ತಾಂತವನ್ನೆಲ್ಲಾ ತಿಳಿಸಿದನು. ಇದನ್ನು ಕೇಳಿದ ಮಲ್ಲಯ್ಯನ ಪಟ್ಟದರಸಿ ಗಂಗಮಾಳಮ್ಮಳಿಗೆ ಈಶ್ವರನನ್ನು ನೋಡುವ ಹಂಬಲವಾಯಿತು. ಅದಕ್ಕಾಗಿ ಗಂಡನಲ್ಲಿ ಬಿನ್ನವಿಸಿದಳು. ನಿಮ್ಮನ್ನು ರಕ್ಷಿಸಿ ನಿಮಗೆ ಜೀವದಾನ ನೀಡಿ ಆದರ ಆದಿತ್ಯಗಳನ್ನು ನೀಡಿದವರಿಗೆ ನಾವು ಆತಿಥ್ಯವನ್ನು ನೀಡುವುದು ಧರ್ಮ. ಅದಕ್ಕಾಗಿ ಈಶ್ವರನಿಗೆ ನಮ್ಮ ಅರಮನೆಗೆ ಬರಲು ಆತಿಥ್ಯವನ್ನು ನೀಡಬೇಕು ಎಂದು ವಿನಂತಿಸಿಕೊಂಡಳು. ಅದರಂತೆ ಮಲ್ಲಯ್ಯನು ಈಶ್ವರನನ್ನು ಕರೆದುಕೊಂಡು ಬರುವಂತೆ ಸೈನಿಕರನ್ನು ಕಳುಹಿಸಿದನು. ರಾಜನ ಆಹ್ವಾನವನ್ನು ಪ್ರೀತಿ, ಭಕ್ತಿಯಿಂದ ಸ್ವೀಕರಿಸಿದ ಈಶ್ವರನು ಮಲ್ಲಯ್ಯನನ್ನು ಕಾಣಲು ಮಾದನ ಹಿಪ್ಪರಿಗೆ ಬಂದನು. ರಾಜದಂಪತಿಗಳಿಬ್ಬರೂ ಅತ್ಯಂತ ಪ್ರೀತಿಯಿಂದ ಉಪಚಾರ ನೀಡಿದರು. ಮಲ್ಲಯ್ಯನ ಹೆಂಡತಿ ಎಂದೂ ತಾನಾಗಿಯೇ ಒಬ್ಬರಿಗೂ ಉಪಚಾರವನ್ನು ಮಾಡಿರಲಿಲ್ಲ. ಆದರೆ ಈಶ್ವರನನ್ನು ನೋಡಿದ ಅವಳ ಮನಸ್ಸು ಈಶ್ವನ ಮೇಲೆ ಅನುರಕ್ತವಾಗಿ ತಾನೇ ಸ್ವತಃ ಊಟವನ್ನು ಬಡಿಸಿ ಉಪಚಾರ ಮಾಡುತ್ತಾಳೆ. ಇದನ್ನು ಕಂಡ ಮಲ್ಲಯ್ಯನಿಗೂ ಆಶ್ಚರ್ಯವಾಗುತ್ತದೆ. ಕುತೂಹಲವನ್ನು ತಡೆದುಕೊಳ್ಳಲಾರದೆ ರಾಣಿಯನ್ನು ಪ್ರಶ್ನಿಸುತ್ತಾನೆ ಎಂದೂ ಯಾರಿಗೂ ಊಟವನ್ನು ನೀಡಿದ ನೀನು ಈಶ್ವರನಿಗೆ ಊಟವನ್ನು ನೀಡಿದುದರ ಕಾರಣವೇನೆಂದು ಕೇಳುತ್ತಾನೆ. ಆದರೆ ಚಾಣಾಕ್ಷಳಾದ ರಾಣಿಯು ನಿಮ್ಮನ್ನು ರಕ್ಷಿಸಿದವನು ನನಗೆ ಸೋದರ ಸಮಾನ. ನನ್ನ ಅಣ್ಣನಿಗೆ ಉಪಚಾರ ಮಾಡಿದರೆ ತಪ್ಪೇನೆಂದು ಕೇಳುತ್ತಾರೆ. ರಾಣಿಯ ಮಾತಿನಿಂದ ಇಬ್ಬರಿಗೂ ಅತ್ಯಾನಂದವಾಗುತ್ತದೆ. ಬಹಳ ಹೊತ್ತಿನವರೆಗೆ ಮಾತನಾಡುತ್ತ ಅತ್ಯಂತ ಸಂತೋಷದಿಂದ ಸ್ನೇಹಿತನನ್ನು ಬೀಳ್ಕೊಟ್ಟು ಮತ್ತೊಮ್ಮೆ ಬರುವಂತೆ ರಾಜನಾದ ಮಲ್ಲಯ್ಯನು ತಿಳಿಸುತ್ತಾನೆ.

ಈಶ್ವರನು ರಾಜದಂಪತಿಗಳ ಅತ್ಯಂತ ಪ್ರೀತಿಯ ಆತಿಥ್ಯವನ್ನು ಸ್ವೀಕರಿಸಿ ತನ್ನ ಕುದುರೆಯನ್ನೇರಿ ಪ್ರಕೃತಿಯ ಸೌಂದರ್ಯವನ್ನು ಸವಿಯುತ್ತ ನಿಧಾನವಾಗಿ ಹೋಗುತ್ತಾನೆ. ಈಶ್ವರನು ಹೋದ ಮೇಲೆ ಮಲ್ಲಯ್ಯನು ತನ್ನ ರಾಜ್ಯಭಾರದ ನಿಮಿತ್ತ ಬೇರೆ ಕಡೆಗೆ ಹೋಗುತ್ತಾನೆ. ಆದರೆ ರಾಣಿ ಗಂಗೆಮಾಳಮ್ಮಳು ಈಶ್ವರನ ರೂಪಕ್ಕೆ ಮರುಳಾಗಿ ಆತನನ್ನು ಮೋಹಿಸುತ್ತಾಳೆ. ಆ ವಿರಹವೇದನೆಯನ್ನು ತಾಳಲಾರದ ಈಶ್ವರನನ್ನು ಕರೆದುಕೊಂಡು ಬರುವಂತೆ ಮಂತ್ರಿಗೆ ಹೇಳಿ ಕಳುಹುತ್ತಾಳೆ. ಸೈನಿಕರು ಈಶ್ವರನನ್ನು ಹುಡುಕುತ್ತಾ ಬಂದು ರಾಜರು ತಮ್ಮ ತಿರುಗಿ ಕರೆದುಕೊಂಡು ಬರಲು ತಿಳಿಸಿದ್ದಾರೆ ಎಂದು ಹೇಳುತ್ತಾರೆ. ಇದರಿಂದ ಈಶ್ವರನಿಗೆ ಗೊಂದಲವಾಗುತ್ತದೆ. ಆದರೂ ರಾಜರ ಅಪ್ಪಣೆಯನ್ನು ಪಾಲಿಸಲೇಬೇಕು ಎಂದು ತಿರುಗಿ ಅರಮನೆಗೆ ಬರುತ್ತಾನೆ. ಆದರೆ ಅಲ್ಲಿ ರಾಜನು ಇರಲಿಲ್ಲ. ಕಾಮಾಂಧಳಾದ ರಾಣಿಯು ನಾನೇ ನಿಮ್ಮನ್ನು ಕರೆಕಳುಹಿಸಿದ್ದು, ನಾನು ನಿಮ್ಮಲ್ಲಿ ಅನುರಕ್ತಳಾಗಿದ್ದೇನೆ. ನನ್ನ ಆಶೆಯನ್ನು ಪೂರೈಸಬೇಕೆಂದು ಕೇಳುತ್ತಾಳೆ. ಇದನ್ನು ಕೇಳಿದ ಈಶ್ವರನಿಗೆ ಬರಸಿಡಿಲು ಬಡೆದಂತಾಗುತ್ತದೆ. "ಸ್ನೇಹಿತನ ಹೆಂಡತಿಯನ್ನು ಮೋಹಿಸುವುದು ಮಹಾಪಾಪ. ಅಲ್ಲದೆ ಎಲ್ಲರ ಎದುರಿಗೆ ನನ್ನನ್ನು ಅಣ್ಣ ಎಂದು

ಕರೆದಿರುವಿರಿ. ನೀವು ಮಾಡುತ್ತಿರುವುದು ತಪ್ಪು" ಎಂದು ತಿಳಿಸಿ ಹೇಳುತ್ತಾನೆ. ಇನ್ನು ತಾನಿಲ್ಲಿ ಇದ್ದರೆ ಅಪರಾಧ ಎಂದು ಭಾವಿಸಿ ತನ್ನ ಕುದುರೆಯನ್ನು ಏರಿ ತನ್ನ ಊರಿಗೆ ಬರುತ್ತಾನೆ.

ಈಶ್ವರನು ತನ್ನನ್ನು ತಿರಸ್ಕರಿಸಿದ್ದು ಗಂಗಮಾಳಮ್ಮಳಿಗೆ ಅವಮಾನವಾಗುತ್ತದೆ. ಈಶ್ವರನ ಮೇಲಿನ ಮೋಹ ದ್ವೇಷವಾಗುತ್ತದೆ. ಅದಕ್ಕಾಗಿ ಅವಳು ಸೇಡು ತೀರಿಸಿಕೊಳ್ಳಬೇಕೆಂದು ನಿರ್ಧರಿಸಿ ರಾಜನಾದ ಮಲ್ಲಯ್ಯನನ್ನು ಕರೆಕಳುಹಿಸಿ ಆತನ ಮುಂದೆ ಈಶ್ವರನ ಮೇಲೆ ಅಪರಾಧ ಹೊರಿಸುತ್ತಾಳೆ. "ಸಹೋದರರನ್ನು ಕಾಣದವಳಾದ ನಾನು ನಿಮಗೆ ಸಂಕಷ್ಟ ಸಮಯದಲ್ಲಿ ಸಹಾಯವಾದವರು ನನ್ನ ಅಣ್ಣನೆಂದು ನಂಬಿ ಪ್ರೇಮದಿಂದ ಕಾಣಲು ಹೋದರೆ ಆ ನೀಚ ಈಶ್ವರ ನನ್ನ ಮೇಲೆ ಅಪಚಾರವೆಸಗಿದನು. ನಾನು ನಿಮಗೆ ಮುಖ ತೋರಿಸುವಂತಿಲ್ಲ" ಎಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. "ನಾನು ಪರಮ ಪತಿವ್ರತೆಯು ಅತಿಥಿಯಾಗಿ ಬಂದು ಇಂತಹ ವರ್ತನೆ ಮಾಡುವುದು ಅಸಹನೀಯ. ತಾವು ಬರುವಷ್ಟರಲ್ಲಿ ಹೇಡಿಯಂತೆ ಹೋಗಿಬಿಟ್ಟ" ಎಂದು ಗಂಡನ ಮುಂದೆ ಹೇಳಿದಳು.

ಇದನ್ನು ಕೇಳಿದ ಮಲ್ಲಯ್ಯನಿಗೆ ಈಶ್ವರನ ಮೇಲೆ ಸಿಟ್ಟು ಬಂದಿತು. ಆತನನ್ನು ಸಂಹರಿಸದೇ ಬಿಡಲಾರೆ ಎಂದು ಸೈನ್ಯವನ್ನು ಸಜ್ಜುಗೊಳಿಸಿ ವೀರನಾದ ರಾಹುತರಾಯನನ್ನು ಸೇನಾಪತಿಯನ್ನಾಗಿ ನೇಮಿಸಿ ಯುದ್ಧಕ್ಕೆ ಹೊರಟನು.

**ವೀರ ರಾಹುತರಾಯ:**

ರಾವುತರಾಯನು ವೀರ ಸೇನಾನಿಯಾಗಿದ್ದನು. ಈತನು ಕುಸ್ತಿ ಪಟುವಾಗಿದ್ದನು. ಇಂದಿನ ಚಟ್ಟರಕಿ ಗ್ರಾಮದ ಗೌಡನಾಗಿ ಯುದ್ಧ ನೈಪುಣ್ಯತೆಯನ್ನು ಹೊಂದಿದ್ದನು. ಕುಸ್ತಿ, ಈಜು, ಮಲ್ಲಯುದ್ಧ, ದೃಷ್ಟಿಯುದ್ಧ, ಕುದುರೆ ಸವಾರಿ, ಬಿಲ್ಲುವಿದ್ಯೆ ಮೊದಲಾದ ವಿದ್ಯೆಗಳನ್ನು ಕರಗತ ಮಾಡಿಕೊಂಡು ವಜ್ರದೇಹಿಯಾಗಿದ್ದನು. ರಾಹುತರಾಯನು ಮಲ್ಲಯ್ಯ ರಾಜನ ಮಂತ್ರಿಯಾದ 'ಹೇಮ' ಎಂಬುವವನ ಸಹೋದರನಾಗಿದ್ದನು.

ರಾಹುತರಾಯನ ಶಕ್ತಿ ಸಾಮರ್ಥ್ಯವನ್ನು ಅರಿತಿದ್ದ ಮಲ್ಲಯ್ಯನಿಗೆ ಈಶ್ವರನನ್ನು ಎದುರಿಸುವುದು ಇವನಿಗೆ ಮಾತ್ರ ಸಾಧ್ಯವೆಂದು ತಿಳಿದು ರಾಹುತನ ಸಹಾಯವನ್ನು ಬೇಡುತ್ತಾನೆ. ತನ್ನ ಮಂತ್ರಿ ಹೇಮನ ಮೂಲಕ ರಾಹುತರಾಯನನ್ನು ಕರೆಕಳುಹಿಸಿ ಈಶ್ವರನನ್ನು ಎದುರಿಸಿ ಆತನನ್ನು ಸಂವಹರಿಸಿ ಬರುವಂತೆ ವಿನಂತಿಸುತ್ತಾನೆ. ರಾಹುತರಾಯನೂ ಈಶ್ವರನ ಶಕ್ತಿಯನ್ನು ಅರಿತಿದ್ದನು. ಅವನನ್ನು ಎದುರಿಸಿ ಆತನನ್ನು ಸೋಲಿಸುವುದು ಅಷ್ಟು ಸುಲಭದ ಮಾತಲ್ಲ ಎಂಬುದು ಗೊತ್ತಿತ್ತು. ಆದರೆ ಈಗ ರಾಜನ ಆಜ್ಞೆಯಾಗಿದೆ. ಅದನ್ನು ಪಾಲಿಸಲೇ ಬೇಕು ಎಂದು ನಿರ್ಧರಿಸಿ ಅದಕ್ಕೆ ಒಪ್ಪಿಗೆಯನ್ನು ಕೊಡುತ್ತಾನೆ. ಆದರೆ ಅದಕ್ಕೆ ಷರತ್ತನ್ನು ವಿಧಿಸುತ್ತಾನೆ. ಅದೆಂದರೆ ನಾನು ಈಶ್ವರನನ್ನು ಯುದ್ಧದಲ್ಲಿ ಸೋಲಿಸಿ ಬಂದರೆ ನನಗೆ ನಿಮ್ಮ

ಮಗಳಾದ 'ಮಾಯಾವತಿ'ಯನ್ನು ನನಗೆ ಮದುವೆ ಮಾಡಿಕೊಡಬೇಕು. ಈ ಷರತ್ತಿಗೆ ಒಪ್ಪಿದರೆ ನಾನು ಯುದ್ಧಕ್ಕೆ ಹೋಗಲು ಸಿದ್ಧ ಎಂದು ತಿಳಿಸುತ್ತಾನೆ. ರಾವುತರಾಯನ ಈ ಷರತ್ತನ್ನು ಕೇಳಿದ ಮಲ್ಲಯ್ಯನಿಗೆ ಏನೂ ತೋಚದಾಗಿ ಸಂದಿಗ್ಧತೆಗೆ ಒಳಗಾಗುತ್ತಾನೆ. ಗಂಡನ ಸಮಸ್ಯೆಯನ್ನು ತಿಳಿದ ಗಂಗಮ್ಮಾಳಮ್ಮಳು ಈಶ್ವರನ ಮೇಲಿನ ದ್ವೇಷದಿಂದ ಮಗಳನ್ನು ಕೊಡಲು ಒಪ್ಪುವಂತೆ ರಾಜನನ್ನು ಒತ್ತಾಯಿಸುತ್ತಾಳೆ. ಆದರೆ ರಾಜನಿಗೆ ಒಬ್ಬಳೇ ಮಗಳನ್ನು ಅದರಲ್ಲಿಯೂ ಅತ್ಯಂತ ರೂಪವತಿಯಾದ ಮಗಳನ್ನು ರಾವುತರಾಯನಿಗೆ ಕೊಡಲು ಮನಸ್ಸು ಒಪ್ಪುವುದಿಲ್ಲ. ಆದರೆ ಗಂಗಮಾಳಮ್ಮಳು ರಾಜನಿಗೆ ಒತ್ತಡವನ್ನು ತಂದು ಇಂದಲ್ಲಾ ನಾಳೆ ಆತ ನಮ್ಮ ಮೇಲೆ ದಾಳಿ ಮಾಡುತ್ತಾನೆ. ಆತ ನಮ್ಮ ವೈರಿಯಾಗಿದ್ದಾನೆ. ವೈರಿಯ ಸಂಹಾರ ಮಾಡಬೇಕಾದರೆ ರಾವುತರಾಯನಿಗೆ ಮಗಳನ್ನು ಕೊಟ್ಟು ಮದುವೆ ಮಾಡುವುದು ಒಳಿತು. ಅಲ್ಲದೆ ರಾವುತರಾಯನು ಶೂರಧೀರನಾಗಿದ್ದಾನೆ. ಅಂತಹ ವೀರನ ಅವಶ್ಯಕತೆ ನಮ್ಮ ರಾಜ್ಯಕ್ಕೆ ಇದೆ. ಅದಕ್ಕಾಗಿ ನೀವು ಇದಕ್ಕೆ ಒಪ್ಪಲೇಬೇಕು ಎಂದು ಒತ್ತಾಸೆಯನ್ನು ಮಾಡಿದಾಗ ವಿಧಿಯಿಲ್ಲದೆ ಮಲ್ಲಯ್ಯನು ರಾವುತರಾಯನಿಗೆ ಮಗಳನ್ನು ಕೊಡುವುದಾಗಿ ವಚನ ಕೊಡುತ್ತಾನೆ. ಇದರಿಂದ ಸಂತುಷ್ಟನಾದ ರಾವುತರಾಯನು ಈಶ್ವರನನ್ನು ಯುದ್ಧದಲ್ಲಿ ಎದುರಿಸಿ ಆತನ ಸಂಹಾರ ಮಾಡಿಬರುವುದಾಗಿ ಭರವಸೆಯನ್ನು ನೀಡಿ ಯುದ್ಧದ ಸಿದ್ಧತೆಯಲ್ಲಿ ತೊಡಗುತ್ತಾನೆ.

ರಾವುತರಾಯನ ಈ ವಿಷಯವಾಗಿ ಹುಟ್ಟಿಕೊಂಡಿರುವ ಕತೆಗಳಲ್ಲಿ ವಿಭಿನ್ನ ನಿಲುವುಗಳಿವೆ. ರಾವುತರಾಯನು ಮಲ್ಲಯ್ಯನ ಹೆಂಡತಿಯಾದ ಗಂಗೆಮಾಳಮ್ಮಳ ಮೇಲೆ ಮೋಹಿತನಾಗಿದ್ದನು. ಅವಳನ್ನು ಪಡೆಯಲು ಹೊಂಚು ಹಾಕಿಕುಳಿತಿದ್ದನು. ಈಗ ತಾನಾಗಿಯೇ ಸಂದರ್ಭಕೂಡಿ ಬಂದಾಗ ಗಂಗೆಮಾಳಮ್ಮಳನ್ನು ತನಗೆ ಒಪ್ಪಿಸುವಂತೆ ಮಲ್ಲಯ್ಯನಲ್ಲಿ ವಚನವನ್ನು ಪಡೆಯುತ್ತಾನೆ. ಈ ಕತೆಯು ಅಷ್ಟೊಂದು ಸಮಂಜಸವೆನಿಸುವುದಿಲ್ಲ. ಗಂಗೆಮಾಳಮ್ಮಾಳೂ ಕಾಮಾತುರಳಾಗಿದ್ದರೂ ಅವಳಿಗೂ ರಾವುತರಾಯನ ಮೇಲೆ ಮನಸ್ಸಿದ್ದರೂ ಅದನ್ನು ಬಹಿರಂಗಗೊಳಿಸಿರಲಿಲ್ಲ. ಆದರೆ ತನ್ನ ಹೆಂಡತಿಯನ್ನು ಕೊಡುವಂತೆ ಹೇಳಲು ಯಾರಿಗೂ ಧೈರ್ಯ ಬರಲಾರದು. ಅಷ್ಟಕ್ಕೂ ಮಲ್ಲಯ್ಯ ರಾಜನಾಗಿದ್ದವನು ಅವನ ಎದುರಿಗೇ ಹೆಂಡತಿಯನ್ನು ಒಪ್ಪಿಸುವಂತೆ ಕೇಳುವುದು ಅಷ್ಟೊಂದು ಸತ್ಯವಾಗಿ ತೋಚುವುದಿಲ್ಲ. ಹೀಗಾಗಿ ರಾಜನಿಗೆ ಇದ್ದ ಒಬ್ಬಳೇ ಮಗಳು 'ಮಾಯಾವತಿ'ಯನ್ನು ಕೇಳಿದ್ದರಲ್ಲಿ ಹೆಚ್ಚು ಸತ್ಯಾಂಶಗಳು ಕಂಡುಬರುತ್ತವೆ. ರಾವುತರಾಯನ ಅಣ್ಣನು ಮಂತ್ರಿಯಾಗಿದ್ದರಿಂದ ಅಣ್ಣನೊಂದಿಗೆ ಆಗಾಗ ಅರಮನೆಗೆ ಬಂದು ಹೋಗುತ್ತಿದ್ದು ಇದರಿಂದ ರಾಜನ ಮಗಳಿಗೂ ಈತನಿಗೂ ಪರಿಚಯವಾಗಿ ರಾವುತರಾಯನ ಶೌರ್ಯ, ಸಾಹಸಗಳಿಗೆ ಮನಸೋತ ಮಾಯಾವತಿಯು, ಇವಳ ಸೌಂದರ್ಯಕ್ಕೆ ಮನಸೋತ ರಾವುತರಾಯ, ಇದರಿಂದ ಅವಕಾಶಕ್ಕಾಗಿ ಕಾದುಕುಳಿತಿದ್ದ ಎನ್ನುವುದನ್ನು ನಂಬುವುದು ಹೆಚ್ಚು ಸಮಂಜಸವಾದುದು.

**ಈಶ್ವರ–ರಾವುತರಾಯರ ನಡುವೆ ಯುದ್ಧ:**

ಈಶ್ವರನನ್ನು ಸಂಹರಿಸಿ ಬರುವುದಾಗಿ ರಾಜನಿಂದ ವಚನವನ್ನು ಪಡೆದು ಒಂದು ಸೈನ್ಯದ ತುಕ್ಕಡಿಯನ್ನು ಸಿದ್ಧಗೊಳಿಸಿ ರಾಜನ ಸಮೇತ ಮುಚ್ಚಂಡಿಗುಡ್ಡಕ್ಕೆ ಬರುತ್ತಾನೆ. ಕಾಡಿನಲ್ಲಿ ಅರ್ಭಟಿಸುತ್ತ ಕಾಡನ್ನು ಪ್ರವೇಶಿಸಿದ ರಾವುತರಾಯನ ಕೂಗು ಕೇಳಿ ಈಶ್ವರನಿಗೆ ಆಶ್ಚರ್ಯವಾಗುತ್ತದೆ. ಗಂಗೆಮಾಳಮ್ಮಳಿಂದ ನಡೆದ ಘಟನೆಯನ್ನು ಮನಸ್ಸಿನಲ್ಲಿಯೇ ತುಂಬಿಕೊಂಡು ಮನಸ್ಸು ಭಿನ್ನವಾಗಿ ಮನೆಯನ್ನು ಸೇರದೆ ಕಾಡಿನಲ್ಲಿಯೇ ಕೋಣೂರ ಹಳ್ಳದ ದಂಡೆಯ ಮೇಲೆ ಇದ್ದ ತನ್ನ ಕುಟೀರದಲ್ಲಿಯೇ ಉಳಿದಿರುತ್ತಾನೆ. ಏಕಾಏಕಿಯಾಗಿ ಕೇಳಿ ಬಂದ ಸೈನಿಕರ ಆರ್ಭಟಕ್ಕೆ ಏನೇ ಗಂಡಾಂತರ ಬಂದಿದೆ ಎಂದು ಭಾವಿಸುತ್ತಾನೆ. ಗಂಗೆಮಾಳಮ್ಮ ಮತ್ತೆ ಸೈನಿಕರನ್ನು ಕಳುಹಿಸಿರಬಹುದೆಂದು ತಿಳಿದು ಹೋರಾಟಕ್ಕೆ ಸಿದ್ಧನಾಗುತ್ತಾನೆ. ರಾವುತರಾಯನು ಈಶ್ವರನನ್ನು ಹುಡುಕುತ್ತಾ ಕುಟೀರಕ್ಕೆ ಬಂದಾಗ ಇಬ್ಬರ ಮಧ್ಯದಲ್ಲಿ ಘೋರ ಯುದ್ಧವಾಗುತ್ತದೆ. ಇಬ್ಬರೂ ಅಷ್ಟೇ ಸರಿಸಮಾನರಾದ ಜಟ್ಟಿಗಳು. ಆದರೆ ಈಶ್ವರ ಒಬ್ಬನೇ ಮಾತ್ರ ರಾವುತರಾಯ ನೂರಾರು ಸೈನಿಕರ ಮಧ್ಯದಲ್ಲಿದ್ದಾನೆ. ಎಲ್ಲರನ್ನೂ ಸಂಹಾರ ಮಾಡುವ ಸಾಮರ್ಥ್ಯವನ್ನು ಹೊಂದಿದ್ದ ಈಶ್ವರ ಅಂಜದೆ ಕಾದಾಡಲು ಸಿದ್ಧನಾಗುತ್ತಾನೆ. ಒಬ್ಬೊಬ್ಬರನ್ನೇ ಸಂಹರಿಸುತ್ತಾ, ವೀರಾವೇಶದಿಂದ ಯುದ್ಧವನ್ನು ಮಾಡುತ್ತಾನೆ.

ಈಶ್ವರ–ರಾವುತರಾಯರ ಮಧ್ಯೆ ಯುದ್ಧ ನಡೆದಿರುವುದು ಮುಚ್ಚಂಡಿಯಲ್ಲಿ ಗೊತ್ತಾಗುತ್ತದೆ. ಈಶ್ವರನ ತಂಗಿ ಜಯದೇವಿಗೆ ಈ ಸುದ್ದಿ ತಿಳಿದು ಭಯಭೀತಳನ್ನಾಗಿ ಮಾಡುತ್ತದೆ. ಈ ಯುದ್ಧದಲ್ಲಿ ನನ್ನ ಸಹೋದರನೇ ಗೆಲ್ಲುವುದೆಂದು ನಂಬುತ್ತಾಳೆ. ಅದಕ್ಕಾಗಿ ಅಣ್ಣನಿಗೆ ಆರತಿಯನ್ನು ಎತ್ತಲು ಕಾಡಿಗೆ ಹೋಗುತ್ತಾಳೆ. ಅಲ್ಲಿ ನಡೆದ ಯುದ್ಧದ ದೃಶ್ಯಗಳನ್ನು ನೋಡಿ ಅನಾಹುತ! ನರಬಲಿ, ಜನರ ನರಳಾಟ ನೋಡಿ ಮನಸ್ಸಿಗೆ ಖೇದವೆನಿಸಿ 'ಜನರ ಪ್ರಾಣಹರಣ ಯಾರ ಹಿತಕ್ಕಾಗಿ' ಎಂದು ಕೊಂಡು 'ಅಣ್ಣಾ ಈಶ್ವರ ತಡೆ' ಎಂದು ಅಣ್ಣನಿಗೆ ಆಜ್ಞೆ ಮಾಡುತ್ತಾಳೆ. ತಂಗಿಯ ಮಾತಿಗೆ ಬೆಲೆಕೊಟ್ಟು ಈಶ್ವರನು ಯುದ್ಧವನ್ನು ನಿಲ್ಲಿಸಿ ಈ ರೀತಿ ಹೇಳುತ್ತಾನೆ. "ತಂಗಿ ನೀನು ಹೇಳಿದ್ದು ಸತ್ಯ. ನನಗಾದರೂ ನಿನ್ನ ಅಮರವಾಣಿಯಿಂದ ನನ್ನ ಪೂರ್ವಜನ್ಮದ ಅರಿವಾಗಿದೆ. ಆದರೆ ಈ ಸದ್ಯದ ಪರಿಸ್ಥಿತಿಯ ಮೇಲಿಂದ ಹಿಂದಿರುಗಿ ಬಂದರೆ ಹೇಡಿ ಅನ್ನುವ ಅಪವಾದವು ನನ್ನ ಪಾಲಿಗೆ ಬರುವುದು. ಹಾಗೆ ಮಾತ್ರ ಮಾಡಲಾರೆ" ಎಂದವನೇ ಕುದುರೆಯನ್ನೇರಿ "ಯುದ್ಧ ಸುರುವಾಗಲಿ" ಎಂದು ರಾವುತನಿಗೆ ಹೇಳಿ ಒಮ್ಮೇಲೆ ತನ್ನ ಕುದುರೆಯನ್ನು ಆತನ ಮೇಲೆ ಏರಿ ಹೊಡೆಯಲು ರಾಹುತನ ಕುದುರೆಯು ಪುಟಿದೆದ್ದು ಓಡಲಾರಂಭಿಸಿತು. ರಾಹುತನು ಯುದ್ಧ ಪ್ರಾರಂಭಿಸಬೇಕೆಂದರೂ ನಿಲ್ಲದೆ ಒಂದೇ ಸವನೆ ಓಡಹತ್ತಿತು. ಈ ಸಂಧಿಯನ್ನು ಬಿಡಬಾರದೆಂದು ಈಶ್ವರನು ರಾಹುತನನ್ನು ಹೊಡೆದು ಉರುಳಿಸಬೇಕೆಂದು ರಾವುತನನ್ನು ಬೆನ್ನಟ್ಟಿದನು.

ತನ್ನ ಕತ್ತಿಯನ್ನು ಹಿರಿದು ರಾವುತನ ಮೇಲೆ ಬೀಸಿದಾಗ ಅದು ಕುದುರೆಯ ಬಾಲಕ್ಕೆ ತಾಗಿ ಕುದುರೆಯ ಬಾಲವು ತುಂಡಾಗಿ ಬೀಳುತ್ತದೆ. ಇದರಿಂದ ಕುದುರೆಯು ನೋವಿನಿಂದ ಹೆಚ್ಚು ವೇಗವಾಗಿ ಓಡುತ್ತ ಕಾಡಿನಲ್ಲಿ ಮರೆಯಾಗುತ್ತದೆ.

ರಾವುತರಾಯ ಮತ್ತು ಈಶ್ವರನ ನಡುವೆ ನಡೆದ ಯುದ್ಧವನ್ನು ಹಲವಾರು ಕತೆಗಳಲ್ಲಿ ವಿಭಿನ್ನವಾಗಿ ಚಿತ್ರಿತವಾಗಿದೆ. ಯುದ್ಧದಲ್ಲಿ ಈಶ್ವರನು ಸೋತು ಗುಡ್ಡದ ಗವಿಯಲ್ಲಿ ಅವಿತುಕೊಂಡನು ಎಂದು ಕೆಲವು ಕತೆಗಳಲ್ಲಿ ಬರುತ್ತದೆ. ರಾವುತರಾಯನೇ ಈಶ್ವರನ ಕುದುರೆಯ ಬಾಲವನ್ನು ಕತ್ತರಿಸಿ ಅದನ್ನು ರಾಜನಿಗೆ ತೋರಿಸುತ್ತಾನೆ ಎಂದು ಕೆಲವು ಕತೆಗಳಲ್ಲಿ ಚಿತ್ರಣಗೊಂಡಿದೆ. ಈ ಎಲ್ಲ ಹೇಳಿಕೆಗಳು ಜನಪದ ಕತೆಗಳಲ್ಲಿ ಮೂಡಿಬಂದಿದ್ದರಿಂದ ಅವುಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳು ಕಂಡು ಬಂದರೂ ಒಟ್ಟಿನಲ್ಲಿ ಕತೆಯ ತಿರುಳು ಒಂದೇ ಆಗಿರುವುದು ಕಂಡುಬರುತ್ತದೆ. ಈ ಎಲ್ಲ ಹಿನ್ನೆಲೆಯಲ್ಲಿ ಈ ಪ್ರಸಂಗವನ್ನು ಕುರಿತು ಈ ರೀತಿಯಾಗಿ ನಿರ್ಣಯಕ್ಕೆಗೊಳ್ಳಬಹುದು.

ರಾವುತರಾಯ–ಈಶ್ವರನಿಗೆ ಯುದ್ಧ ನಡೆದು ಆ ಯುದ್ಧದಲ್ಲಿ ರಾವುತರಾಯನ ಕುದುರೆಯ ಬಾಲವು ತುಂಡಾಗಿ ಆತನ ಕುದುರೆಯ ಹೆದರಿ ಓಡಿ ಹೋಗಿರಬಹುದಾಗಿದೆ. ಈಶ್ವರನು ಅವನನ್ನು ಸಂಹರಿಸಲು ಸಾಕಷ್ಟು ದೂರದವರೆಗೆ ಕಾಡಿನಲ್ಲಿ ಅಲೆದು ಕೊನೆಗೆ ಆತ ಸಿಗದಿದ್ದಾಗ ತಿರುಗಿ ತನ್ನ ತಂಗಿಯನ್ನು ಕೂಡಿಕೊಳ್ಳಲು ಯುದ್ಧ ನಡೆದ ಸ್ಥಳಕ್ಕೆ ಬಂದಿರಬಹುದು. ಅಷ್ಟರಲ್ಲಿಯೇ ರಾವುತರಾಯನು ಅಲ್ಲಿಯೇ ಯಾವುದಾದರೊಂದು ಕುದುರೆಯ ಬಾಲವನ್ನು ಕತ್ತರಿಸಿಕೊಂಡು ರಾಜನಿಗೆ ಅವನನ್ನು ಸೋಲಿಸುವುದಾಗಿ ತಿಳಿಸಲು ತೆಗೆದುಕೊಂಡು ಹೋಗಿರಬಹುದಾಗಿದೆ. ಸ್ಥಳೀಯರು ತಮ್ಮ ನಾಯಕನ ಹಿರಿಮೆಯನ್ನು ಹೆಚ್ಚಿಸಲು ಈ ರೀತಿಯ ಕತೆಯನ್ನು ಚಿತ್ರಿಸುವುದು ಜನಪದ ಕತೆಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ.

**ಈಶ್ವರನ ಸಹೋದರಿ ಜಯದೇವಿಯ ಅಂತ್ಯ:**

ರಾಹುತರಾಯ ಮತ್ತು ಈಶ್ವರ ಇಬ್ಬರೂ ಭಯಂಕರವಾದ ಯುದ್ಧದಲ್ಲಿ ನಿರತರಾದಾಗ ಈ ಸುದ್ದಿಯನ್ನು ತಿಳಿದು ಯುದ್ಧ ನಡೆದ ಸ್ಥಳಕ್ಕೆ ಆಗಮಿಸಿದ ಈಶ್ವರನ ತಂಗಿ ಜಯದೇವಿಯು ಅಲ್ಲಿ ಯುದ್ಧದ ಪರಿಣಾಮಗಳನ್ನು ಕಣ್ಣಾರೆ ನೋಡುತ್ತಾಳೆ. ಅಲ್ಲಲ್ಲಿ ಸೈನಿಕರು ಸತ್ತು ಬಿದ್ದಿದ್ದರು. ಕೆಲವರು ರಕ್ತದ ಮಡುವಿನಲ್ಲಿ ಕೈಕಾಲುಗಳನ್ನು ಕಳೆದುಕೊಂಡು ಒದ್ದಾಡುತ್ತಿದ್ದರು. ಅವರ ಆಕ್ರಂದನ ಮುಗಿಲು ಮುಟ್ಟಿತ್ತು. ಇದೆಲ್ಲವನ್ನು ನೋಡಿದ ಜಯದೇವಿಯ ಕರುಳು ಕರಗುತ್ತದೆ. ಯಾವ ಪುರುಷಾರ್ಥಕ್ಕಾಗಿ ಈ ಯುದ್ಧ, ನನ್ನ ಅಣ್ಣ ಇದುವರೆಗೆ ಒಬ್ಬನನ್ನೂ ಕೊಂದಿಲ್ಲ. ಎಲ್ಲರಿಗೂ ರಕ್ಷಕನಾಗಿದ್ದ! ಈಗ ನಿರ್ಧಯಿಯಾಗಿ ಅಮಾಯಕರಾದ ಇವರನ್ನೆಲ್ಲಾ ಸಾಯಿಸುತ್ತಿದ್ದಾನೆ. ನಾನು ಯುದ್ಧವನ್ನು ನಿಲ್ಲಿಸು ಎಂದರೂ ಆತ ನನ್ನ

ಮಾತನ್ನು ಕೇಳದೆ ಯುದ್ಧದಲ್ಲಿ ಮಗ್ನನಾಗಿದ್ದಾನೆ. ಇದುವರೆಗೂ ನಾನು ಹೇಳಿದ ಮಾತನ್ನು ಮೀರಿಲ್ಲ! ನನ್ನ ವಿರುದ್ಧವಾಗಿ ಒಂದೂ ಕೆಲಸವನ್ನು ಮಾಡಿಲ್ಲ! ಈಗ ನನ್ನ ಮಾತನ್ನು ಧಿಕ್ಕರಿಸಿ ಯುದ್ಧ ಮಾಡುತ್ತಿದ್ದಾನೆ. ನಾನಿನ್ನು ಬದುಕಿರಬಾರದು. ನಾನು ಸಾಯಲೇಬೇಕು ಎಂದು ನಿರ್ಧರಿಸುತ್ತಾಳೆ. ಅಣ್ಣನಿಗೆ ಆರತಿ ಬೆಳಗಲು ತಂದಿದ್ದ ಆರತಿಯ ತಟ್ಟೆಯನ್ನು ಅಲ್ಲಿಯೇ ಬಂಡೆಗಲ್ಲಿನ ಮೇಲಿಟ್ಟು ತನ್ನ ಒಡವೆ ವಸ್ತುಗಳನ್ನು ಕಳಚಿ ಗುಡ್ಡದ ಮೇಲಿನಿಂದ ಕೆಳಗೆ ಹಳ್ಳಕ್ಕೆ ಧುಮುಕುತ್ತಾಳೆ. ಕ್ಷಣ ಮಾತ್ರದಲ್ಲಿಯೇ ಜಯದೇವಿಯು ಹಳ್ಳದ ದಂಡೆಯ ನೀರಿನ ಮಡುವಿನಲ್ಲಿ ಹೆಣವಾಗಿ ಬಿದ್ದುಕೊಂಡಳು.

ಈಶ್ವರನು ರಾಹುತರಾಯನನ್ನು ಬೆನ್ನಟ್ಟಿ ಬಹಳಷ್ಟು ದೂರದವರೆಗೆ ಸಾಗಿ ಆತನು ಸಿಗದಿದ್ದಾಗ ಮರಳಿ ತನ್ನ ತಂಗಿಯ ಕೂಡಿಕೊಳ್ಳಲು ಬರುತ್ತಾನೆ. ಎಲ್ಲ ಕಡೆಗೆ ಹುಡುಕಿದರೂ ತಂಗಿಯು ದೊರೆಯದಿದ್ದಾಗ ಬಳಲಿದ ಈಶ್ವರನು ನೀರು ಕುಡಿಯಲೆಂದು ಹಳ್ಳದ ದಂಡೆಗೆ ಬರುತ್ತಾನೆ. ಅಲ್ಲಿ ತನ್ನ ತಂಗಿಯ ಉಡಿಗೆ ತೊಡುಗೆಗಳನ್ನು ನೋಡಿ ಭಯಭೀತನಾಗಿ ಹಳ್ಳದ ನೀರಿನಲ್ಲಿ ಇಣುಕಿ ನೋಡುತ್ತಾನೆ. ಅಲ್ಲಿ ತನ್ನ ಸಹೋದರಿಯು ಜಲಸಮಾಧಿಯಾಗಿ ಬಿದ್ದಿರುವುದನ್ನು ಕಂಡು ವ್ಯತೆ ಪಡುತ್ತಾನೆ. ನನ್ನಿಂದಾಗಿಯೇ ನನ್ನ ಸಹೋದರಿ ಪ್ರಾಣವನ್ನು ಕಳೆದುಕೊಂಡಳು. ಅವಳ ಮಾತನ್ನು ನಾನು ಪಾಲಿಸಿದ್ದರೆ ಅವಳು ಖಂಡಿತವಾಗಿಯೂ ನೊಂದುಕೊಳ್ಳುತ್ತಿರಲಿಲ್ಲ. ನನ್ನ ಮೇಲೆ ಸಿಟ್ಟಾಗಿ ಹೀಗೆ ಅನಾಹುತಮಾಡಿಕೊಂಡಳು ಎಂದು ಹೇಳಿ ತನ್ನ ಬಗೆಗೆ ಜಿಗುಪ್ಸೆಗೊಂಡನು. ಇನ್ನು ಮುಂದೆ ನಾನು ನನ್ನ ತಂಗಿಯ ಹೇಳಿಕೆಯಂತೆ ದೇವಾದಿದೇವನಾದ ಆ ಪರಮೇಶ್ವರನನ್ನು ಕಾಣುವುದೇ ಲೇಸು ಎಂದು ನಿಶ್ಚಯಿಸಿ ದರಿಯ ಓರೆಯನ್ನು ಏರಿ ಧ್ಯಾನಾಸಕ್ತನಾಗಲು ಯೋಗ್ಯವಾದ ಸ್ಥಳವನ್ನು ಶೋಧಿಸಿದನು. ಅಲ್ಲಿಯೇ ಒಂದು ದೊಡ್ಡ ಬಂಡೆಗಲ್ಲು ಅದಕ್ಕೆ ಹೊಂದಿ ಒಂದು ಬಿಲ್ವ ಪತ್ರಿಯ ಗಿಡ ಅವನ ಕಣ್ಣಿಗೆ ಬಿದ್ದು ಅಲ್ಲಿಯೇ ಕುಳಿತು ತಪಶ್ಚರ್ಯ ಮಾಡಲು ನಿರ್ಧರಿಸಿದನು.

ಮಲ್ಲಯ್ಯನ ಸ್ನೇಹದಿಂದ ಒಳ್ಳೆಯ ಮಾನವೀಯತೆಯನ್ನು ಮೈಗೂಡಿಸಿಕೊಂಡು, ಗಂಗಮಾಳಮ್ಮಳ ಕಾಮದೃಷ್ಟಿಯಿಂದ ಪಾರಾಗಿ ಜೀವನದಲ್ಲಿ ವೈರಾಗ್ಯವನ್ನು ತಾಳಿ, ರಾಹುತರಾಯನ ಆಕ್ರಮಣದಿಂದ ವೀರ ಯೋಧನಾಗಿ ಈಗ ತಂಗಿಯ ಸಾವಿನಿಂದ ಜೀವನ ಮುಕ್ತಿಗಾಗಿ ತಪಶ್ಚರ್ಯ ಮಾಡಲು ನಿರ್ಧರಿಸುತ್ತಾನೆ.

**ಈಶ್ವರನ ತಪೋನುಷ್ಠಾನ:**

ಶಿವ ಸಾಕ್ಷಾತ್ಕಾರಕ್ಕಾಗಿ, ಆತ್ಮ ಶಾಂತಿಗಾಗಿ ಈಶ್ವರನು ಬಂಡೆಗಲ್ಲಿನ ಮೇಲೆ ಕುಳಿತು ತಪಸ್ಸನ್ನು ಆಚರಿಸುತ್ತಾನೆ. ಶೀರ್ಷಾಸನ ಹಾಕಿ ತದೇಕ ಚಿತ್ತದಿಂದ ಧ್ಯಾನದಲ್ಲಿ ಮಗ್ನನಾಗುತ್ತಾನೆ. ಮನುಷ್ಯರ ಸುಳಿವು ಸ್ವಲ್ಪವೂ ಇಲ್ಲದ ಆ ದಟ್ಟ ಅರಣ್ಯದಲ್ಲಿ ಅವನ ತಪಸ್ಸು ಯಾವುದೇ ಆತಂಕವಿಲ್ಲದೆ ಸಾಗಿ

ಶಿವನನ್ನು ಒಲಿಸಿಕೊಳ್ಳುತ್ತದೆ. ಶಿವನ ಪ್ರತ್ಯಕ್ಷನಾಗಿ "ನಿನ್ನ ತಪಶ್ಚರ್ಯಕ್ಕೆ ಮೆಚ್ಚಿದೆ ನಿನ್ನ ಇಚ್ಛೆ ಏನಿದೆ ಬೇಡು" ಎನ್ನಲು ಆಗ ಈಶ್ವರನು ನನ್ನ ತಂಗಿಯನ್ನು ಮರಳಿ ಕೊಡುವಂತೆ ಬೇಡಿಕೊಳ್ಳಲು ಆಗ ಜಯದೇವಿಯು ಅಲ್ಲಿ ಪ್ರತ್ಯಕ್ಷಳಾಗಿ ಶಿವನಿಗೆ ನಮಸ್ಕರಿಸಿ ಕುಳಿತಳು. ಆಗ ಈಶ್ವರನು ಶಿವನನ್ನು ಕುರಿತು ನಮ್ಮಿಬ್ಬರನ್ನು ನಿನ್ನ ಸನ್ನಿಧಿಗೆ ಮರಳಿ ಕರೆದುಕೊಂಡು ಹೋಗು ನಾವಿಬ್ಬರೂ ದೇವಲೋಕಕ್ಕೆ ಬರುತ್ತೇವೆ ಎಂದು ಬೇಡಿಕೊಂಡನು. ಆಗ ಪರಶಿವನು ಎಲ್ಲಿದೆ ದೇವಲೋಕ? ಸತ್ಪುರುಷರು ವಾಸಿಸುವ ಸ್ಥಳವೇ ಸ್ವರ್ಗಲೋಕ. ನಿನ್ನಿಂದ ಈ ಲೋಕ ಪಾವನವಾಗಬೇಕಿದೆ. ನಿಮ್ಮಿಬ್ಬರ ಆಶೀರ್ವಾದದಿಂದ ಇಲ್ಲಿಯ ಜನರು ಪಾವನವಾಗಬೇಕಿದೆ. ನೀವು ಇಲ್ಲಿಯೇ ಅಂತರ್ಧ್ಯಾನವಾಗಿರಿ. ನಿಮ್ಮ ಪೂಜೆಗಳು ನಿತ್ಯವೂ ನಡೆಯಲಿ. ನಾನೂ ಕೂಡ ಇಲ್ಲಿಯೇ ನಿಮ್ಮ ಬೆನ್ನ ಹಿಂದೆಯೇ ಇರುತ್ತೇನೆ. ಶ್ರೀಶೈಲದ ಎಲ್ಲ ಕುರುಹುಗಳು ಇಲ್ಲಿವೆ. ಮುಂದೆ ಪಾತಾಳಗಂಗೆ, ಹಿಂದೆ ಭೀಮನಕೊಳ್ಳ ಎದುರಿನಲ್ಲಿ ಅಡಕೇಶ್ವರ, ಶಿಖರೇಶ್ವರ ಮೊದಲಾದ ಎಲ್ಲ ಕುರುಹುಗಳು ಇಲ್ಲಿಯೇ ಇರುವುದರಿಂದ ನಾನು ಇಲ್ಲಿಯೇ ಮಲ್ಲಿಕಾರ್ಜುನ ಎಂಬ ಅಭಿದಾನದಿಂದ ಇರುವೆನು. ನೀನು ಏನೂ ಚಿಂತಿಸಬೇಡ ಎಂದು ಹೇಳಿ ಅಂತರ್ಧ್ಯಾನನಾದನು.

ಈಶ್ವರನ ಬಗೆಗಿನ ಈ ವಿಷಯವು ಪೌರಾಣಿಕ ಹಿನ್ನೆಲೆಯನ್ನು ಒಳಗೊಂಡಿದೆ. ಈಶ್ವರನ ಮಹಿಮೆಯನ್ನು ಹೆಚ್ಚಿಸಲು ಈ ರೀತಿಯ ಪ್ರಸಂಗವನ್ನು ಚಿತ್ರಿಸಿರುವುದು ಸ್ಪಷ್ಟವಾಗುತ್ತದೆ. ಈ ರೀತಿಯಾದ ಕತೆಯನ್ನು ಬಹಳಷ್ಟು ಜನಪದ ದೈವಗಳಲ್ಲಿ ನಾವು ಕಾಣಬಹುದಾಗಿದೆ. ಆದರೆ ಇದರಲ್ಲಿಯ ಸತ್ಯಾಂಶವನ್ನು ಹೊರತೆಗೆದಾಗ ಈ ಕೆಳಗಿನ ವಿಷಯಗಳು ಸತ್ಯವೆಂದು ಗೋಚರಿಸುತ್ತವೆ. ಈಶ್ವರನು ಜೀವನದಲ್ಲಿ ವೈರಾಗ್ಯವನ್ನು ತಾಳಿ ತಪೋನಿಷ್ಠನಾಗಿ ಆಧ್ಯಾತ್ಮ ಜೀವನವನ್ನು ಸಾಗಿಸಿದನು. ಯೋಗಬಲದಿಂದ ಧ್ಯಾನವನ್ನು ಮಾಡಿ ಜನರ ಮಧ್ಯದಲ್ಲಿ ಯೋಗಿಯಾದನು. ಈಶ್ವರನ ಜೀವನದಲ್ಲಿ ನಡೆದ ಘಟನೆಗಳು ಆತನನ್ನು ವೈರಾಗ್ಯದತ್ತ ಸಾಗಿಸಿದವು. ಯುದ್ಧ, ಸಾವು, ನೋವುಗಳು ಆತನ ಸಹೋದರಿಯ ಸಾವು ಮುಂತಾದ ವಿಷಯಗಳು ಆತನನ್ನು ವೈರಾಗ್ಯದತ್ತ ತಂದು ನಿಲ್ಲಿಸಿದ್ದವು. ತನ್ನ ಗುರುವಿನಿಂದ ಆಧ್ಯಾತ್ಮ ಸಾಧನೆಗೆ ಬೇಕಾದ ವಿದ್ಯೆಯನ್ನು ಕಲಿತಿದ್ದ ಈಶ್ವರನಿಗೆ ಅದನ್ನು ಸಾಧಿಸಲು ಹೆಚ್ಚು ಕಷ್ಟವಾಗಲಿಲ್ಲ. ಧ್ಯಾನಂ ನಿರ್ವಿಷಯಂ ಮನಃ ಎಂಬುದನ್ನು ಅರೆತಿದ್ದ ಈಶ್ವರನು ಧ್ಯಾನದಿಂದ ಮನವನ್ನು ಸಂತೈಸಿಕೊಂಡನು. ಒಬ್ಬ ವೀರಯೋಧನ ತೇಜಸ್ಸನ್ನು ಹೊಂದಿದ್ದ ಈಶ್ವರನು ಧ್ಯಾನದಿಂದ ಯೋಗಿಯ ಕಳೆಯನ್ನು ಹೊಂದಿದನು. ಈತನಲ್ಲಾದ ಈ ಬದಲಾವಣೆಯು ಜನರಲ್ಲಿ ದೈವತ್ವದ ಭಾವನೆಯನ್ನು ಮಾಡಿಸಿದ್ದಿರಬಹುದಾಗಿದೆ. ಮಾನವೀಯ ಗುಣಗಳನ್ನು ಹೊಂದಿದ್ದ ಈಶ್ವರನು ಮುಂದೆ ತನ್ನ ವೈರಿಗಳನ್ನು ಕ್ಷಮಿಸುತ್ತಾನೆ. ಜನಹಿತಕಾರ್ಯಗಳನ್ನು ಮಾಡುತ್ತಿದ್ದ ಈಶ್ವರನು ಮಾನವೀಯ ಧರ್ಮವನ್ನು ಪರಿಪಾಲಿಸಿ ದೈವತ್ವಕ್ಕೆ ಏರಿದನು. ಇದೆಲ್ಲದರ ಜೊತೆಗೆ ಉತ್ತಮವಾದ ಚಾರಿತ್ರ್ಯವನ್ನು ಹೊಂದಿ ಜನರ ಮನದಲ್ಲಿ ದೇವರಾಗಿ ರೂಪಗೊಂಡನು.

**ಈಶ್ವರನು ದರಿದೇವರಾದದ್ದು:**

ಯೋಗ, ತಪಸ್ಸು, ಧ್ಯಾನದಿಂದ ಅಗಾಧವಾದ ದೈವಿಶಕ್ತಿಯನ್ನು ಹೊಂದಿದ ಈಶ್ವರನು ಯೋಗಿಯ ತೇಜಸ್ಸನ್ನು ಪಡೆದನು. ಈ ಮೊದಲೇ ವ್ಯಾಯಾಮ, ಬ್ರಹ್ಮಚರ್ಯದಿಂದ ವಜ್ರದೇಹಿಯಾದ ಈಶ್ವರನು ಈಗ ಮತ್ತಷ್ಟು ಕ್ಷಾತ್ರ ತೇಜಸ್ಸನ್ನು ಪಡೆದನು. ಎಲ್ಲಕ್ಕಿಂತ ಮಿಗಿಲಾಗಿ ಆತನ ಪರಿಶುದ್ಧವಾದ ಮನಸ್ಸು, ಎಲ್ಲರನ್ನೂ ಪ್ರೀತಿಯಿಂದ ಕಾಣುವ ಗುಣ, ಅವನ ನಿಷ್ಕಲ್ಮಶವಾದ ಹೃದಯ ಅವನ ಸೌಂದರ್ಯವನ್ನು ಹೆಚ್ಚಿಸಿದ್ದವು. ಕಣ್ಣುಗಳಲ್ಲಿ ದೈವಾಂಶವು ತುಂಬಿ ಬಂದಿತ್ತು. ಅವನನ್ನು ನೋಡಿದವರು ಭಕ್ತಿಭಾವದಿಂದ ಅವನಿಗೆ ನಮಸ್ಕರಿಸುತ್ತಿದ್ದರು. ನಿರಂತರವಾಗಿ ಯೋಗ ಜೀವನವನ್ನು ಸಾಗಿಸಿ ದೈವತ್ವವನ್ನು ಪಡೆದುಕೊಂಡ ಈಶ್ವರನು ದೇವಸ್ವರೂಪಿಯಾದನು. ಊರಿನ ಜಂಜಾಟದಿಂದ, ಸಂಸಾರದ ತಾಪತ್ರಯಗಳಿಂದ ದೂರ ಉಳಿದು ಸದಾಕಾಲ ಗುಡ್ಡದ ಗವಿಯಲ್ಲಿಯೇ ಉಳಿದು ಯೋಗ ಜೀವನವನ್ನು ಸಾಗಿಸುತ್ತಿದ್ದ ಈಶ್ವರನು ಜನರ ಪಾಲಿಗೆ ದರಿದೇವನಾದನು. ದರಿಯಲ್ಲಿಯೇ ಉಳಿದುಕೊಂಡಿದ್ದರಿಂದ ಈತನು ದರಿದೇವನಾದನು. ಅವನು ವಾಸಿಸಿದ ಗುಡ್ಡವು ದರಿಗುಡ್ಡವಾಯಿತು.

ಪ್ರಕೃತಿಯ ಸುಂದರವಾದ ಮಡಿಲಲ್ಲಿ ನಿರ್ಜನವಾದ ಪ್ರದೇಶದಲ್ಲಿ ಆತನ ತಪಸ್ಸಿಗೆ ಯಾವುದೇ ಭಂಗ ಒದಗಿ ಬರಲಿಲ್ಲಾ. ಸಾಮಾನ್ಯರು ಅಲ್ಲಿ ಹಾದು ಹೋಗಲು ಅಂಜುತಿದ್ದ ಭಯಂಕರವಾದ ಕಾಡು ದರಿದೇವರನ ವಾಸ್ತವ್ಯದಿಂದ ಪಾವನ ಕ್ಷೇತ್ರವಾಯಿತು. ನಿತ್ಯ ಜನರ ಚಟುವಟಿಕೆಯ ತಾಣವಾಯಿತು. ದಿನನಿತ್ಯ ಹಲವಾರು ಜನರು ದರಿದೇವರ ದರ್ಶನಕ್ಕಾಗಿ ಬಂದು ಹೋಗತೊಡಗಿದರು. ಹೀಗೆ ದರಿಗೆ ಹೋಗಿ ಬಂದವರೆಲ್ಲ ಪಾವನವಾಗತೊಡಗಿದರು. ಅದೇ ದರಿಕೊಳ್ಳವೆಂದು ಪ್ರಸಿದ್ಧಿಯನ್ನು ಪಡೆಯತೊಡಗಿತು.

**ರಾಹುತರಾಯನ ಮನಃಪರಿವರ್ತನೆ:**

ರಾಹುತರಾಯನು ಈಶ್ವರನೊಂದಿಗೆ ಯುದ್ಧ ಮಾಡಿ ಜಯಶಾಲಿಯಾದನೆಂಬ ಹುಮ್ಮಸ್ಸಿನಲ್ಲಿಯೇ ಮಾದನಹಿಪ್ಪರಗಿಗೆ ಹಿಂತಿರುಗಿ ಬಂದನು. ಇನ್ನು ತಾನು ರಾಜನ ಮಗಳನ್ನು ಮದುವೆಯಾಗಿ ಸುಖದಿಂದ ಇರಬಹುದು ಎಂದು ವಿಚಾರಿಸುತ್ತಾ ರಾಜನ ಆಮಂತ್ರಣವನ್ನು ಕಾಯ್ದು ಕುಳಿತನು. ಆದರೆ ರಾಜನು ಯಾವುದೇ ಆಮಂತ್ರಣವನ್ನು ನೀಡದಿದ್ದಾಗ ತಾನೇ ರಾಜನಲ್ಲಿಗೆ ಹೋಗಿ ಈಗಾಗಲೇ ತಾವು ಕೊಟ್ಟ ವಚನದಂತೆ ಮಗಳನ್ನು ಕೊಟ್ಟು ಮದುವೆ ಮಾಡುವಂತೆ ವಿನಂತಿಸಿದನು. ಈಶ್ವರನನ್ನು ಸೋಲಿಸಿ ಅವನ ಕುದುರೆಯ ಬಾಲವನ್ನು ತಂದಿರುವುದಾಗಿ ತೋರಿಸಿದನು. ಆದರೆ ಮಲ್ಲಯ್ಯನು ಇದಕ್ಕೆ ಒಪ್ಪದಾದನು. ಆಗ ರಾಹುತರಾಯನು ರಾಜನು ತನಗೆ ಮೋಸ ಮಾಡಿದನು. ತಾನು ಕೊಟ್ಟ ವಚನದಂತೆ ನಡೆದುಕೊಳ್ಳುತ್ತಿಲ್ಲವೆಂದು ಎಲ್ಲರಿಗೂ ತಿಳಿಸಿದನು. ರಾಜನ ಮಂತ್ರಿಯಾದ ಹೇಮನು ರಾಹುತರಾಯನ ಸಹೋದರನಾಗಿದ್ದರಿಂದ ಮಂತ್ರಿಯು ಈ ವಿಷಯವನ್ನು ಗಂಭೀರವಾಗಿ ತೆಗೆದುಕೊಂಡು

ರಾಜಸಭೆಯನ್ನು ಸೇರಿಸಿ ರಾಹುತರಾಯನ ಪರವಾಗಿಯೇ ನಿರ್ಣಯವನ್ನು ತೆಗೆದುಕೊಂಡನು. ಇದರಿಂದ ರಾಜನಿಗೆ ಏನು ಮಾಡಬೇಕೆಂಬುದು ಗೊತ್ತಾಗದೆ ಹೆಂಡತಿಯ ಮುಂದೆ ಈ ವಿಷಯವನ್ನು ಪ್ರಸ್ತಾಪಿಸಿದನು. ಆಗ ಗಂಗಮಾಳಮ್ಮಳು ಮತ್ತೊಂದು ಉಪಾಯವನ್ನು ಸೂಚಿಸಿದಳು. ಬೆಳಗಾಗುವುದರೊಳಗೆ ಏಳು ಕೋಟಿ ದೀವಟಿಗೆಗಳನ್ನು ಹಾಗೂ ಅಷ್ಟು ಸಂಖ್ಯೆಯ ಜನರನ್ನು ಕೂಡಿಸಬೇಕು. ಇದು ನನ್ನಿಂದ ಸಾಧ್ಯವಾದರೆ ನಮ್ಮ ಮಗಳನ್ನು ಕೊಡುವುದಾಗಿ ಎಂದು ಸೂಚಿಸಿದಳು. ಇದು ರಾಜನಿಗೂ ಸರಿ ಎನಿಸಿ ಈ ಷರತ್ತನ್ನು ರಾಹುತರಾಯನಿಗೆ ನೀಡಿದನು. ಆಗ ರಾಹುತರಾಯನು ಇದು ಏನೂ ದೊಡ್ಡ ವಿಷಯವಲ್ಲ. ನಾಳೆಯೇ ಈ ಕಾರ್ಯ ಮಾಡುತ್ತೇನೆ ಹೇಳಿದನು. ಅದೇ ರೀತಿ ತನ್ನಲ್ಲಿರುವ ಶಕ್ತಿ ಸಾಮರ್ಥ್ಯಗಳನ್ನು ಉಪಯೋಗಿಸಿ ಏಳು ಕೋಟಿ ದೀವಟಿಗೆಗಳನ್ನು ಕೂಡಿಸಲು ಪ್ರಯತ್ನಿಸಿದನು. ಆದರೆ ಅದು ಅವನಿಂದ ಸಾಧ್ಯವಾಗಲಿಲ್ಲ. ಇದರಿಂದ ರಾಹುತರಾಯನಿಗೆ ನಿರಾಶೆಯಾಯಿತು. ಅಲ್ಲದೆ ವಿನಾಕಾರಣವಾಗಿ ನಾನು ಈಶ್ವರನ ಜೊತೆಗೆ ಯುದ್ಧ ಮಾಡಬೇಕಾಯಿತಲ್ಲ. ಈಶ್ವರನು ನನಗೆ ಮಾಡಿದ ಕೆಡಕಾದರು ಏನು? ನಾನು ಒಂದು ದುಷ್ಟ ಆಶೆಗಾಗಿ ನಿರಪರಾಧಿಯಾದ ವ್ಯಕ್ತಿಯ ಜೊತೆಗೆ ಯುದ್ಧ ಮಾಡಿದ್ದು ತಪ್ಪು ಎಂದೆನಿಸಿತು. ಒಂದು ಕಡೆ ರಾಜನಿಂದ ಅವಮಾನ ಮತ್ತೊಂದು ಕಡೆ ಏನೂ ತಪ್ಪು ಮಾಡದವನ ಜೊತೆಗೆ ಹಗೆತನ ಕಟ್ಟಿಕೊಂಡದ್ದು ಇದೆಲ್ಲವೂ ರಾಹುತನ ಮನಸ್ಸನ್ನು ಘಾಸಿಗೊಳಿಸಿತು. ಆತನ ಶಾಂತಿಯೇ ಹಾಳಾಯಿತು. ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು ಈಶ್ವರನಲ್ಲಿ ಕ್ಷಮೆಯನ್ನು ಕೇಳಿಕೊಳ್ಳಬೇಕೆಂದು ನಿರ್ಧರಿಸಿದನು.

**ಗಂಗಮಾಳಮ್ಮಳ ಪ್ರಾಯಶ್ಚಿತ್ತ:**

ಮಲ್ಲಯ್ಯನಿಗೆ ಎದುರಾಗಿದ್ದ ತೊಂದರೆಗಳೆಲ್ಲವೂ ನಿವಾರಣೆಯಾಗಿದ್ದವು. ಈಶ್ವರ ತನಗೆ ಮೋಸ ಮಾಡಿದ್ದು ನನ್ನ ಹೆಂಡತಿಗೆ ತೊಂದರೆ ಕೊಟ್ಟದ್ದು ರಾಹುತರಾಯನ ಸಮಸ್ಯೆ ಪರಿಹಾರವಾದದ್ದು ಎಲ್ಲವೂ ರಾಜನನ್ನು ನಿರಾತಂಕಗೊಳಿಸಿದ್ದವು. ಇನ್ನು ನಾನು ಯಾವುದೇ ತೊಂದರೆಗಳಿಲ್ಲದೆ ಸುಖದಿಂದ ರಾಜ್ಯವಾಳಬಹುದೆಂದು ಭಾವಿಸಿದನು. ಆದರೆ ಗಂಗಮಾಳಮ್ಮಳ ಮನಸ್ಸು ಮಾತ್ರ ಈಶ್ವರನ ಬಗೆಗೆ ಯೋಚಿಸುತ್ತಿತ್ತು. ತಾನು ಅಪರಾಧ ಮಾಡಿದೆ. ಏನೂ ತಪ್ಪು ಮಾಡದ ಈಶ್ವರನ ಮೇಲೆ ತಪ್ಪು ಹೊರಿಸಿ ಅವನಿಗೆ ತೊಂದರೆ ಕೊಟ್ಟೆನು ಎಂದು ಮನಸ್ಸಿನಲ್ಲಿಯೇ ವೇದನೆ ಪಡತೊಡಗಿದಳು. ಈ ಚಿಂತೆಯೇ ಅವಳ ನೆಮ್ಮದಿಯನ್ನು ಹಾಳು ಮಾಡಿ ಅವಳ ಆರೋಗ್ಯವನ್ನೂ ಕೆಡಿಸಿತು. ದಿನದಿಂದ ದಿನಕ್ಕೆ ಕೃಷವಾಗುತ್ತ ಸಾಗಿದಳು. ಯಾವುದೇ ಉಪಚಾರ ನೀಡಿದರು ಅವಳ ಆರೋಗ್ಯ ಸುಧಾರಿಸಲಿಲ್ಲ. ಇದರಿಂದ ಚಿಂತಾಕ್ರಾಂತನಾದ ರಾಜನು ಅವಳ ಮನಸ್ಸಿನೊಳಗೆ ಏನೋ ಕೊರಗಿದೆ ಎಂದು ಅರಿತನು. ಅದಕ್ಕಾಗಿ ಹೆಂಡತಿಯನ್ನು ವಿಚಾರಿಸಿದನು. ಈಗ ನಮಗೆ ಯಾವುದೇ ತೊಂದರೆಗಳಿಲ್ಲ. ಎಲ್ಲವೂ ಪರಿಹಾರವಾಗಿವೆ.

ಆದರೆ ನೀನು ಮಾತ್ರ ಯಾವುದೋ ಚಿಂತೆಯನ್ನು ತಲೆಯಲ್ಲಿ ತುಂಬಿಕೊಂಡು ಕೊರಗುತ್ತಿರುವೆ. ಮತ್ತೆ ಹಾಗೇನಾದರೂ ಇದ್ದರೆ ಹೇಳು ನನ್ನ ರಾಜ್ಯವೆಲ್ಲ ಹೋದರೂ ಚಿಂತೆ ಇಲ್ಲ. ನಿನ್ನ ಚಿಂತೆಯನ್ನು ಪರಿಹರಿಸುತ್ತೇನೆ ಎಂದು ಹೇಳಿದನು. ಆಗ ಗಂಗೆಮಾಳಮ್ಮಳು ಗಂಡನ ಮುಂದೆ ತಾನು ಈಶ್ವರನಿಗೆ ಮಾಡಿದ ದ್ರೋಹವನ್ನು ತಿಳಿಸುತ್ತಾಳೆ. ಇದನ್ನು ಕೇಳಿದ ಮಲ್ಲಯ್ಯನು ವ್ಯಥೆಪಡುತ್ತಾನೆ. ವಿನಾಕಾರಣವಾಗಿ ತಾನು ಈಶ್ವರನಿಗೆ ತೊಂದರೆಯನ್ನು ನೀಡಿದೆ. ನನ್ನನ್ನು ಅಪಾಯದಿಂದ ಪಾರು ಮಾಡಿದ ಆತ್ಮೀಯ ಸ್ನೇಹಿತನಿಗೆ ನಾನು ದ್ರೋಹ ಮಾಡಿದೆ. ನನ್ನಿಂದ ಘೋರ ಪಾಪವಾಯಿತು ಎಂದು ಹಲಬಿದನು. ತನ್ನ ಹೆಂಡತಿ ರಾಜ್ಯದ ಬಗೆಗೆ ಜಿಗುಪ್ಸೆ ತಾಳಿದನು. “ನಾನು ಈಗಲೇ ಹೋಗಿ ಈಶ್ವರನನ್ನು ಕಂಡು ಅವನಲ್ಲಿ ಕ್ಷಮೆಯನ್ನು ಕೇಳಿಕೊಳ್ಳಬೇಕೆಂದು ನಿರ್ಧರಿಸಿ ರಾಜ್ಯವನ್ನು ತೊರೆದು ಈಶ್ವರನನ್ನು ಹುಡುಕುತ್ತ ಕಾಡಿಗೆ ಬಂದನು.”

**ಮಲ್ಲಯ್ಯ ದರಿದೇವರ ಭೇಟಿ:**

ಮಲ್ಲಯ್ಯನಿಗೆ ತಾನು ಮಾಡಿದ ಅಪರಾಧದಿಂದ ಮುಕ್ತಿಯನ್ನು ಹೊಂದಲು ಪರಿತಪಿಸುತ್ತ ಈಶ್ವರನನ್ನು ಹುಡುಕುತ್ತ ಯುದ್ಧ ನಡೆದ ಸ್ಥಳವನ್ನು ಹುಡುಕುತ್ತಾ ಬಂದನು. ಭಯಾನಕವಾದ ಕಾಡಿನಲ್ಲಿ ಅಲೆದು ದರಿದೇವರ ಗುಡ್ಡಕ್ಕೆ ಬಂದನು. ಅಲ್ಲಿ ಒಬ್ಬ ಯೋಗಿಯನ್ನು ಕಂಡು ಆತನ ತೇಜಸ್ಸಿಗೆ ಬೆರಗಾಗಿ ಆತನಿಗೆ ನಮಸ್ಕರಿಸಿ ತಾನು ಬಂದ ಕಾರಣವನ್ನು ಹೇಳಿದನು. ದರಿದೇವರೇ ಈಶ್ವರನೆಂಬುದನ್ನು ಮಲ್ಲಯ್ಯನಿಗೆ ಗುರುತಿಸಲು ಸಾಧ್ಯವಾಗಲಿಲ್ಲ. ಆಗ ದರಿದೇವರು ನೀವು ಯಾರೆಂದು ಕೇಳಲು ಆಗ ಮಲ್ಲಯ್ಯನು ತನ್ನ ವೃತ್ತಾಂತವನ್ನೆಲ್ಲಾ ಹೇಳುತ್ತಾನೆ. ಇದನ್ನು ಕೇಳಿದ ದರಿದೇವರು ನಿಮ್ಮ ಸ್ನೇಹಿತನಾದ ಈಶ್ವರ ನಾನೇ ಎಂದು ಹೇಳಿದಾಗ ಮಲ್ಲಯ್ಯ ಆಶ್ಚರ್ಯ ಚಕಿತನಾಗಿ ದರಿದೇವರ ಕಾಲಮೇಲೆ ಬಿದ್ದು ನನ್ನನ್ನು ಕ್ಷಮಿಸುವಂತೆ ಬೇಡಿಕೊಳ್ಳುತ್ತಾನೆ. ನಾನು ಹೆಂಡತಿಯ ಮಾತನ್ನು ಕೇಳಿಕೆಟ್ಟೆನು. ಹೆಣ್ಣು ಮಾಯೆಯೆಂಬುದು ಸತ್ಯ. ಆ ಮಾಯೆಯ ಮಾತನ್ನೂ ಕೇಳಿ ನಿನ್ನಂತ ಆತ್ಮೀಯ ಸ್ನೇಹಿತನ ಮೇಲೆ ಸಂಶಯಗೊಂಡು ನನ್ನ ಸಂಶಯವನ್ನು ಕಳೆದುಕೊಂಡು ನಿನ್ನ ಮೇಲೆ ಯುದ್ಧ ಸಾರಿದ. ನಾನು ಮಾಡಿದ್ದು ಮಹಾಪಾಪ! ನನ್ನ ಪಾಪವನ್ನು ಮನ್ನಿಸಿ ನನಗೆ ಆಶೀರ್ವದಿಸಬೇಕೆಂದು ಪ್ರಾರ್ಥಿಸಿದನು. ಆಗ ದರಿದೇವರು ವಿನಮ್ರದಿಂದ ನೀವು ಮಹಾರಾಜರು. ಹೀಗೆ ದೈನ್ಯದಿಂದ ಬೇಡಿಕೊಳ್ಳುವುದು ಉಚಿತವಲ್ಲ. ನನಗೆ ನಿಜಾಂಶ ಎಲ್ಲವೂ ತಿಳಿದುಬಂದಿದೆ. ನಿಮ್ಮ ಮಹಾರಾಣಿಯು ಪತಿವೃತೆಯಾಗಿದ್ದಾಳೆ. ನೀವು ಯಾವುದಕ್ಕೂ ಸಂಶಯ ಪಡುವುದು ಬೇಡ. ನೀವು ಹೀಗೆ ರಾಜ್ಯವನ್ನು ತೊರೆದು ಬಂದರೆ ಅಲ್ಲಿ ಪ್ರಜೆಗಳ ಗತಿ ಏನು! ಎಲ್ಲವೂ ಆ ದೇವನ ಆಟದಂತೆ ನಡೆಯುತ್ತದೆ. ನಾವು ಇಲ್ಲಿ ನೆಪ ಮಾತ್ರ! ಎಂದು ಮಲ್ಲಯ್ಯನಿಗೆ ದರಿದೇವರು ಉಪದೇಶ ನೀಡುತ್ತಾನೆ. ಆದರೆ ಮಲ್ಲಯ್ಯನು ದರಿದೇವರನ್ನು ಅಗಲಿ

ಹೋಗಲು ಸಿದ್ಧನಿಲ್ಲ. ನಾನೂ ಇಲ್ಲಿಯೇ ಉಳಿದುಕೊಳ್ಳುವುದಾಗಿ ತಿಳಿಸುತ್ತಾನೆ. ಆಗ ದರಿದೇವರು ನಾನು ಸನ್ಯಾಸಿ ನನ್ನ ಜೊತೆಗೆ ಕಾಡಿನಲ್ಲಿ ಅಲೆಯುವುದು ಮಹಾರಾಜರಾದ ತಮಗೆ ಉಚಿತವಲ್ಲ. ನಾನು ಯಾವಾಗಲೂ ನಿಮ್ಮ ಜೊತೆಗೆ ಇರುತ್ತೇನೆ. ನಿಮ್ಮಿಂದ ಆಗಬೇಕಾದ ಕಾರ್ಯಗಳು ಬಹಳಷ್ಟಿವೆ. ಆದಷ್ಟು ಬೇಗ ನೀವು ನಿಮ್ಮ ರಾಜ್ಯವನ್ನು ಸೇರಿಕೊಳ್ಳಿ ಎಂದು ಉಪದೇಶ ನೀಡಿದನು. ಮಲ್ಲಯ್ಯನು ಒಲ್ಲದ ಮನಸ್ಸಿನಿಂದ ದರಿದೇವರನ್ನು ಅಗಲಿ ತನ್ನ ರಾಜ್ಯಕ್ಕೆ ಮರಳಿದನು.

ದರಿದೇವರ ಈ ಪ್ರಸಂಗವು ಕಥನಕವಾಗಿ ಕಂಡು ಬಂದರೂ ಇದರಲ್ಲಿಯ ಸತ್ಯಾಂಶಗಳನ್ನು ಗಮನಿಸಿದಾಗ ಒಳ್ಳೆಯತನವು ಯಾವುದೇ ಕಾಲದಲ್ಲಿಯೂ ಒಂದು ಮೌಲ್ಯವಾಗಿದೆ. ದರಿದೇವರ ಕ್ಷಮಾಗುಣವು ಆತನನ್ನು ದೈವದತ್ತಕ್ಕೆ ಏರಿಸಿತು. ಮಲ್ಲಯ್ಯ, ರಾಹುತರಾಯ, ಗಂಗಮಾಳಮ್ಮ ದರಿದೇವರಿಗೆ ಅನ್ಯಾಯಮಾಡಿದರೂ ಅವರನ್ನು ಕ್ಷಮಿಸುವ ಗುಣವನ್ನು ಹೊಂದಿದ್ದರಿಂದಲೇ ಆತನನ್ನು ಜನರು ಸ್ವೀಕರಿಸಿದರು. ಸಾಮಾನ್ಯ ಮನುಷ್ಯರಲ್ಲಿ ಕಂಡು ಬರುವ ದ್ವೇಷ, ಅಸೂಯೆ, ಮೋಹ, ಮತ್ಸರ ಗುಣಗಳು ಶಮನವಾದಾಗಲೇ ಆತನು ದೈವತ್ವಕ್ಕೆ ಏರಬಹುದು. ಹೀಗಾಗಿ ದರಿದೇವರು ಈ ಎಲ್ಲ ಗುಣಗಳನ್ನು ಬೆಳೆಸಿಕೊಂಡು ಸಾಮಾನ್ಯನಿಂದ ಅಸಾಮಾನ್ಯತ್ವಕ್ಕೆ ಏರಿದನು.

ಭಾರತೀಯ ಪುರಾಣ ಪುರುಷರ ಜೀವನ ಚರಿತ್ರೆಯಲ್ಲಿ ಸಾಮಾನ್ಯವಾಗಿ ಕಂಡು ಬರುವ ಪವಾಡಗಳು ದರಿದೇವರ ಜೀವನದಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ. ಜನಪದರು ಆತನನ್ನು ವೈಭವೀಕರಣಗೊಳಿಸಿರಬಹುದು. ಆದರೆ ಅದು ದರಿದೇವರ ಮೇಲಿನ ಭಕ್ತಿ, ವಿಶ್ವಾಸ, ನಂಬಿಕೆಯ ಭಾವವೇ ಹೊರತು ಅದು ಯಾವುದೇ ಪವಾಡವಲ್ಲ.

ದರಿದೇವರು ಪೌರಾಣಿಕ ಅಥವಾ ಜನಪದ ದೇವರಷ್ಟೇ ಅಲ್ಲ, ಆತನು ಐತಿಹಾಸಿಕ ವ್ಯಕ್ತಿ. ಅವನು ಕೈಕೊಂಡ ಒಳ್ಳೆಯ ಕಾರ್ಯಗಳೇ ಆತನನ್ನು ದೈವತ್ವಕ್ಕೆ ಏರಿಸಿರುವುದು ಆತನ ಜೀವನದ ಘಟನೆಗಳಿಂದ ತಿಳಿದುಬರುತ್ತದೆ.

**ದರಿದೇವರ ಅಂತರ್ದಾನ:**

ದರಿದೇವರ ಕೀರ್ತಿ ದಿನದಿಂದ ದಿನಕ್ಕೆ ಹೆಚ್ಚುತ್ತಾ ಸಾಗಿದಂತೆ ಆತನ ದರ್ಶನಕ್ಕಾಗಿ ಬರುವ ಜನರೂ ಹೆಚ್ಚಾದರು. ದಿನನಿತ್ಯ ಯೋಗ, ಪೂಜೆ, ಧ್ಯಾನವನ್ನು ತಪ್ಪದೇ ಪಾಲಿಸುತ್ತ ಜನರ ಕಷ್ಟಗಳಿಗೆ ಪರಿಹಾರವನ್ನು ಒದಗಿಸುತ್ತ, ಆದರ್ಶ ಜೀವನದ ಸೂತ್ರಗಳನ್ನು ಉಪದೇಶಿಸುತ್ತ ಮುಚ್ಚಂಡಿಯ ಸಮೀಪದ ಗುಡ್ಡದ ಗವಿಯಲ್ಲಿಯೇ ನೆಲೆಸಿದನು. ಹೀಗೆಯೇ ಕೆಲವು ದಿನಗಳು ಕಳೆದವು. ಭಕ್ತರ ಆಗಮನವು ಯಥಾ ಪ್ರಕಾರ ನಡೆದಿತ್ತು. ಒಂದು ದಿವಸ ಮೈಯಲ್ಲಿ ಸ್ವಲ್ಪ ಆಯಾಸವಾದಂತಾಗಿತ್ತು. ಆದರೂ ಅವರು ಅದನ್ನು ತೋರಗೊಡದೆ ದಿನದಂತೆಯೇ ಇದ್ದರು. ಇಲ್ಲಿಂದ ಕೆಲವು ಭಕ್ತರ ಮುಂದೆ "ನಾನು ನಾಳಿಗೆ ಪ್ರಯಾಣ ಮಾಡುವವನಿದ್ದೇನೆ" ಎಂದು ತಮ್ಮ ಅಂತಿಮ ಯಾತ್ರೆಯ ಸೂಚನೆಯನ್ನು ಒಗಟಾಗಿಯೇ

ತಿಳಿಸಿದರು. ಆದರೆ ಭಕ್ತರಿಗೆ ಇದರ ಅರಿವಾಗಲಿಲ್ಲ. ಯತಿವರ್ಯರು ಎಲ್ಲಿಗಾದರೂ ಹೋಗಿ ಬರುತ್ತಿರಬಹುದು. ನಾವೇಕೆ ಅವರಿಗೆ ಅಡ್ಡಬಾಯಿ ಹಾಕಿ ತೊಂದರೆ ಕೊಡುವದೆಂದು ಸುಮ್ಮನಾದರು. ಮರುದಿನ ಎಂದಿನಂತೆ ಪೂಜಾ ವಿಧಿವಿಧಾನಗಳನ್ನು ಮುಗಿಸಿ ಗುಡ್ಡದ ಗವಿಯೊಳಗೆ ಹೋಗಿ ಧ್ಯಾನಾಸಕ್ತರಾದರು. ಅವರ ಧ್ಯಾನಕ್ಕೆ ಯಾವುದೇ ಅಡ್ಡಿಆತಂಕಗಳಲ್ಲಿ ಧ್ಯಾನಾಸಕ್ತರಾಗಿಯೇ ಅಲ್ಲಿಯೇ ಅಂತರಗತರಾದರು.

ಕೆಲವು ದಿನಗಳ ನಂತರ ಕೋಣೂರರದ ಭಕ್ತರು ಯೋಗಿಗಳ ಭೆಟ್ಟಿಗೆಂದು ಬಂದರು. ಅವರ ನಿವಾಸ ಸ್ಥಾನವಾದ ಬಂಡೆಗಲ್ಲು ಹಾಗೂ ಬಿಲ್ವಪತ್ರಿಯ ಗಿಡದ ಕೆಳಗೆ ಯತಿವರರನ್ನು ಕಾಣದೆ ಪಾದುಕೆ ಹಾಗೂ ಬೆತ್ತ ಕಂಡು ಎಲ್ಲಿಯಾದರೂ ಹೋಗಿರಬಹುದು ಎಂದು ಕಾದುಕುಳಿತರು. ಆದರೆ ಬಹಳ ಹೊತ್ತಿನವರೆಗೆ ಬರದೇ ಇದ್ದಾಗ ಅಲ್ಲಿಯೇ ಕಾಡಿನ ಸುತ್ತಮುತ್ತಲೆಲ್ಲ ಹುಡುಕಾಡ ತೊಡಗಿದರು. ಆಗ ಇದಕ್ಕಿದ್ದಂತೆ “ದರಿದೇವರು ಶಿವನಲ್ಲಿ ಐಕ್ಯರಾದರು” ಎಂದು ಆಕಾಶವಾಣಿಯಾಯಿತು.

ದರಿದೇವರು ಲಿಂಗೈಕ್ಯರಾದ ಬಳಿಕ ಗುಡ್ಡಕ್ಕೆ ಬರುವ ಜನರ ಸಂಖ್ಯೆ ಕಡಿಮೆಯಾಯಿತು. ದಿನನಿತ್ಯ ದೇವರ ದರ್ಶನಕ್ಕಾಗಿ ಬರುತ್ತಿದ್ದವರು ಈಗ ಅವರಿಲ್ಲದೆ ಗುಡ್ಡಕ್ಕೆ ಬರದಾದರು. ಆದರೂ ಕೆಲವು ಭಕ್ತರು ಆಗಾಗ ಅವರು ತಪಸ್ಸು ಮಾಡಿದ ಸ್ಥಳಕ್ಕೆ ಬಂದು ಪೂಜೆ ಪುರಸ್ಕಾರಗಳನ್ನು ಮಾಡಿ ಹೋಗುತ್ತಿದ್ದರು. ಅವರು ತಪಸ್ಸು ಮಾಡಿದ ಸ್ಥಳವು ಜಾಗೃತ ಸ್ಥಾನವಾಗಿತ್ತು. ಯಾವುದೇ ಒಂದು ಶಕ್ತಿ ಜನರನ್ನು ಆಕರ್ಷಿಸುತ್ತಿತ್ತು. ಆ ಸ್ಥಳದಲ್ಲಿ ಕುಳಿತರೆ ಮನಸ್ಸಿಗೆ ಆನಂದ ದೊರೆಯುತ್ತಿತ್ತು. ಹೀಗಾಗಿ ಜನರ ಬಂದು ಹೋಗುವಿಕೆಯೇ ಅಲ್ಲಿ ದರಿದೇವರ ಕುರುಹು. ಅವರು ತಮ್ಮ ಇರುವಿಕೆಯ ಯಾವುದೇ ಕುರುಹುಗಳನ್ನು ಬಿಟ್ಟು ಹೋಗಲಿಲ್ಲ.

ಇಲ್ಲಿಯವರೆಗಿನ ದರಿದೇವರ ಚರಿತ್ರೆಯು ಇಂದಿಗೂ ಜನರ ಬಾಯಲ್ಲಿ ಉಳಿದುಕೊಂಡು ಬಂದಿದೆ. ಜಾನಪದರು ತಮ್ಮ ಆರಾಧ್ಯ ದೈವನ ಮಹಿಮೆಯನ್ನು, ಜೀವನ ಸಾಧನೆಯನ್ನು ಕಥೆಕಟ್ಟಿ, ಹಾಡಿ ಹೊಗಳುತ್ತಾರೆ. ಜನರ ನಂಬಿಕೆ, ಆಚರಣೆ, ಸಂಪ್ರದಾಯಗಳೇ ದರಿದೇವರ ಅಸ್ತಿತ್ವವನ್ನು ಮುಂದುವರೆಸಿಕೊಂಡು ಬಂದಿವೆ. ಮುಂದೆ ನಿರ್ಮಾಣಗೊಂಡ ಬೃಹತ್ ದೇವಾಲಯವು ಕೂಡ ದಂತಕತೆಯ ರೂಪದ ಚರಿತ್ರೆಯನ್ನೇ ಹೊಂದಿದೆ.



## ಅಧ್ಯಾಯ : ನಾಲ್ಕು

# ದರಿದೇವರ ದೇವಾಲಯ ನಿರ್ಮಾಣ ಹಾಗೂ ವಾಸ್ತುಶಿಲ್ಪ

ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ತಮ್ಮ ಇಷ್ಟದೇವನನ್ನು ಸರ್ವಕಾಲ ಆರಾಧಿಸಲು ಆತನಿಗೆ ಮಂದಿರವನ್ನು ಕಟ್ಟಿ ಅಲ್ಲಿ ಆತನ ವಿಗ್ರಹವನ್ನು ಇಟ್ಟು ಪೂಜೆ ಮಾಡುವುದು ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಸಾಮಾನ್ಯವಾಗಿ ಈ ದೇವಾಲಯಗಳನ್ನು ರಾಜಮಹಾರಾಜರು, ಭಕ್ತರು, ಊರಿನವರು ಸೇರಿ ಕಟ್ಟಿಸುತ್ತಾರೆ. ಇಂತಹ ದೇವಾಲಯಗಳ ನಿರ್ಮಾಣಕ್ಕೆ ಒಂದು ಕಾರಣ ಕೂಡಿ ಬಂದಿರುವುದು ಸಾಮಾನ್ಯ. ಕನಸಿನಲ್ಲಿ ಬಂದು ತನ್ನ ದೇವಾಲಯವನ್ನು ಕಟ್ಟಿಸುವಂತೆ ಕೇಳಿಕೊಳ್ಳುವುದು, ಭಕ್ತರ ಒತ್ತಾಯ, ರಾಜರ ಪ್ರತಿಷ್ಠೆ, ಗ್ರಾಮದ, ರಾಜ್ಯದ ರಕ್ಷಣೆ–ಹೀಗೆ ಹಲವಾರು ಕಾರಣಗಳು ಕಂಡು ಬರುತ್ತವೆ. ದರಿದೇವರ ದೇವಾಲಯದ ನಿರ್ಮಾಣದಲ್ಲಿಯೂ ಇಂತಹ ಘಟನೆ ನಡೆದು ಬೃಹತ್ ದೇವಾಲಯ ನಿರ್ಮಾಣಗೊಂಡಿರುವುದು ವಿಶಿಷ್ಟವಾಗಿದೆ. ಈ ದೇವಾಲಯದ ನಿರ್ಮಾಣದ ಹಿಂದೆ ಒಂದು ದಂತಕತೆ ಪ್ರಚಲಿತವಿರುವುದು ಕಂಡುಬರುತ್ತದೆ. ಅದು ದಂತಕಥೆಯಾದರೂ ವಾಸ್ತವಕ್ಕೆ ತೀರ ಸಮೀಪವಾಗಿದೆ. ಈ ಕತೆಯ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯವನ್ನು ಮೂರು ಭಾಗಗಳಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ೧. ದೇವಾಲಯದ ನಿರ್ಮಾಣ ೨. ದೇವಾಲಯದ ವಾಸ್ತುಶಿಲ್ಪ ೩. ಗಡಿ ಸಮಸ್ಯೆ.

**೧. ದೇವಾಲಯದ ನಿರ್ಮಾಣ:** ದರಿದೇವರ ದೇವಾಲಯವನ್ನು ಕಟ್ಟಿಸಿದವನು ಇಂದಾಪೂರ ಗ್ರಾಮದ ಮುತ್ತು ರತ್ನದ ವ್ಯಾಪಾರಿಯಾದ ನಾರಾಯಣ ಕರವಾಡೆ ಮತ್ತು ಆತನ ಸಂಗಡಿಗರು ಎನ್ನುವುದು ಸ್ಪಷ್ಟವಾಗಿದೆ. ದರಿದೇವರ ಬಗೆಗೆ ಹುಟ್ಟಿಕೊಂಡ ಎಲ್ಲಾ ದಂತಕಥೆಗಳಲ್ಲಿ ಇಂದಾಪೂರದ ನಾರಾಯಣ ಎಂಬುದು ಸ್ಪಷ್ಟವಾಗಿ ಉಲ್ಲೇಖವಾಗಿದೆ.

**ಹಿನ್ನೆಲೆ :** ಇಂದಾಪೂರ ಗ್ರಾಮದ ನಾರಾಯಣ ಕರವಾಡೆ ಎನ್ನುವವನು ಶ್ರೀಮಂತ ವ್ಯಾಪಾರಿಯಾಗಿದ್ದನು. ಆತನು ಮುತ್ತು ರತ್ನಗಳನ್ನು ಊರಿಂದೂರಿಗೆ ತೆಗೆದುಕೊಂಡು ಹೋಗಿ ವ್ಯಾಪಾರ ಮಾಡುತ್ತಿದ್ದನು. ಹೀಗೆಯೇ ಒಂದು ದಿನ ವ್ಯಾಪಾರಕ್ಕಾಗಿ ದರಿದೇವರ ಗುಡ್ಡದ ಮೇಲಿಂದ ಹೋಗುತ್ತಿರುವಾಗ ದರಿದೇವರ ಗುಡ್ಡದಲ್ಲಿ ವಿಶ್ರಾಂತಿ ಪಡೆಯುತ್ತಾನೆ. ಆಗ ಅಲ್ಲಿಗೆ ದನಕಾಯುವ ಬಾಲಕನ ವೇಷದಲ್ಲಿ ದರಿದೇವನು ಬಂದು ಈ ಗಂಟು ಮೂಟೆಯಲ್ಲಿ ಏನಿವೆ! ಎಂದು ಕೇಳುತ್ತಾನೆ. ಆಗ ವ್ಯಾಪಾರಿಗಳಿಗೆ ಈತ ಕಳ್ಳರ ಗುಂಪಿನವ ಇರಬೇಕೆಂದು ಸಂಶಯಗೊಂಡು ಈ ಗಂಟುಗಳಲ್ಲಿ ಇದ್ದಲಿಗಳಿವೆ. ಅವುಗಳನ್ನು ವಿಜಾಪುರಕ್ಕೆ ಮಾರಾಟ ಮಾಡಲು ಹೋಗುತ್ತಿದ್ದೇವೆ ಎಂದರು. ಆಗ ಬಾಲಕನು ನಗುತ್ತ ಹಾಗೆಯೇ ಆಗಲಿ ಎಂದು ಹೇಳಿ ಅಲ್ಲಿಂದ ಹೋದನು. ಕೆಲವು ಸಮಯದ ವಿಶ್ರಾಂತಿಯ ನಂತರ ವ್ಯಾಪಾರಿಗಳು ತಮ್ಮ ತಮ್ಮ ಗಂಟುಗಳನ್ನು ತೆಗೆದುಕೊಂಡು ವಿಜಾಪೂರಕ್ಕೆ ಮಾರಲು ತರುತ್ತಾರೆ. ಅಲ್ಲಿ ವ್ಯಾಪಾರ ಮಾಡಲು ಗಂಟುಗಳನ್ನು ಬಿಚ್ಚಿದಾಗ ಅದರಲ್ಲಿಯ ಮುತ್ತು ರತ್ನಗಳೆಲ್ಲ ಇದ್ದಲಿಯ ಚೂರುಗಳಾಗಿದ್ದವು. ಇದನ್ನು ನೋಡಿದ ವ್ಯಾಪಾರಿಗಳಿಗೆ ಆಶ್ಚರ್ಯವಾಯಿತು. ಇದರೊಳಗೆ ಇದ್ದಲಿಗಳು ಹೇಗೆ ಬಂದವು ಎಂಬುದು ಚಿಂತೆಯಾಯಿತು. ಆಗ ಅವರಿಗೆ ಒಮ್ಮೆಲೆ ಹೊಳೆದದ್ದು ಕಾಡಿನಲ್ಲಿ ಭೆಟ್ಟಿಯಾದ ಬಾಲಕ. ಇದು ಆತನ ಪವಾಡವೇ ಇರಬಹುದೆಂದು ತಿಳಿದು ತಿರುಗಿ ಆ ಸ್ಥಳಕ್ಕೆ ಬರುತ್ತಾರೆ. ಆಗ ಅಲ್ಲಿಯೇ ಆ ಬಾಲಕ ನಗುತ್ತ ನಿಂತಿದ್ದನು. ವ್ಯಾಪಾರಿಗಳೆಲ್ಲ ಅವನಲ್ಲಿಗೆ ಧಾವಿಸಿ ಕೈಮುಗಿದು ನಮ್ಮದು ತಪ್ಪಾಯಿತು; ನಾವು ಕಳ್ಳರ ಭಯದಿಂದ ಇದ್ದಲಿಗಳಿವೆ ಎಂದು ಹೇಳಿದೇವು! ನಮ್ಮ ತಪ್ಪನ್ನು ಮನ್ನಿಸಬೇಕೆಂದು ಪ್ರಾರ್ಥಿಸಿದರು. ಆಗ ಬಾಲಕನ ವೇಷದ ದರಿದೇವನು ತನ್ನ ನಿಜರೂಪವನ್ನು ತೋರಿಸಿ ನಿಮ್ಮ ವ್ಯಾಪಾರವು ಹತ್ತು ಪಟ್ಟು ಹೆಚ್ಚಾಗಲಿ ಎಂದು ಆಶೀರ್ವಾದ ಮಾಡುತ್ತಾನೆ. ಅಲ್ಲದೆ ಗಂಟಿನಲ್ಲಿದ್ದ ಇದ್ದಲಿಗಳೆಲ್ಲ ಮೊದಲಿನಂತೆ ಮುತ್ತುರತ್ನಗಳಾದವು. ಇದರಿಂದ ಸಂತೋಷಗೊಂಡ ನಾರಾಯಣ ಮತ್ತು ಇನ್ನುಳಿದ ವ್ಯಾಪಾರಿಗಳು ದರಿದೇವರ ಮಹಿಮೆಯನ್ನು ಕೊಂಡಾಡುತ್ತ ತಮ್ಮ ಊರಿಗೆ ಪ್ರಯಾಣ ಬೆಳೆಸಿದರು.

ದರಿದೇವರ ಆಶೀರ್ವಾದವನ್ನು ಪಡೆದ ನಾರಾಯಣ ಮತ್ತು ಆತನ ಸಂಗಡಿಗರು ಮುಂದೆ ತಮ್ಮ ವ್ಯಾಪಾರದಲ್ಲಿ ಮಗ್ನರಾಗುತ್ತಾರೆ. ಆದರೆ ಅವರ ಮುಂದಿನ ವ್ಯಾಪಾರದಲ್ಲಿ ದಿನದಿಂದ ದಿನಕ್ಕೆ ಹತ್ತು ಪಟ್ಟು ಲಾಭವನ್ನೇ ಗಳಿಸುತ್ತಾ ಸಾಗುತ್ತಾರೆ. ಇಷ್ಟೊಂದು ಲಾಭ ಬರಲು ಕಾರಣ ದರಿದೇವರ ಆಶೀರ್ವಾದವೇ ಕಾರಣವೆಂದು ಅವರಿಗೆ ತಿಳಿದು ಈ ಲಾಭದ ಹಣದಲ್ಲಿ ಏನಾದರೂ ಒಳ್ಳೆಯ ಕಾರ್ಯವನ್ನು ಕೈಕೊಳ್ಳಲು ನಿರ್ಧರಿಸುತ್ತಾರೆ. ನಾರಾಯಣ ಮತ್ತು ಸಂಗಡಿಗರು ಮುಚ್ಚಂಡಿಗೆ ಬಂದು ದರಿದೇವರ ಗುಡ್ಡದಲ್ಲಿ ಏನಾದರೂ ಒಂದು ಒಳ್ಳೆಯ ಕಾರ್ಯಮಾಡುವ ತಮ್ಮ ಮನದ ಇಂಗಿತವನ್ನು ತಿಳಿಸುತ್ತಾರೆ. ಆಗ ಊರಿನ ಜನರೆಲ್ಲ ಸೇರಿ ಇಲ್ಲೊಂದು ದೇವಾಲಯ ನಿರ್ಮಾಣವಾದರೆ ಅದೊಂದು

ದೊಡ್ಡ ಪವಿತ್ರ ಕ್ಷೇತ್ರವಾಗುತ್ತದೆ. ಅದಕ್ಕಾಗಿ ನಾವೂ ಸಹಾಯ ಸಹಕಾರವನ್ನು ನೀಡುತ್ತೇವೆ ಎಂದು ಭರವಸೆಯನ್ನು ನೀಡಿದರು. ಆಗ ನಾರಾಯಣನು ದೇವಾಲಯವನ್ನು ಕಟ್ಟಿಸಿಕೊಡಲು ನಿರ್ಧರಿಸುತ್ತಾನೆ. ಆದರೆ ಅದು ಬಹಳ ಕಷ್ಟದ ಕೆಲಸವಾಗಿತ್ತು. ಗುಡ್ಡದ ವಾರೆಯಲ್ಲಿ ಗುಡಿಕಟ್ಟಿಸುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಯಾವುದೇ ರಸ್ತೆ ಸಂಪರ್ಕವಿಲ್ಲದ ದಟ್ಟ ಕಾಡಿನಲ್ಲಿ ಕಲ್ಲುಗಳನ್ನು ಹೊತ್ತು ದೇವಾಲಯವನ್ನು ಕಟ್ಟಿಸುವುದೆನೇಂದರೆ ಅದು ಅಸಾಧ್ಯದ ಮಾತಾಗಿತ್ತು. (ಈಗಿರುವ ದೇವಾಲಯವನ್ನು ನೋಡಿದರೆ ಇದನ್ನು ಹೇಗೆ ಕಟ್ಟಿರಬಹುದೆಂಬ ಆಶ್ಚರ್ಯ ಸೋಜಿಗ ಸಹಜವಾಗಿ ಉಂಟಾಗುತ್ತದೆ) ಆದರೆ ದೃಢ ಸಂಕಲ್ಪ ಮಾಡಿದಾಗ ಯಾವುದೇ ಕಾರ್ಯಕೈಗೂಡುತ್ತೆ ಎನ್ನುವುದಕ್ಕೆ ದರಿದೇವರ ದೇವಾಲಯದ ನಿರ್ಮಾಣವೇ ಸಾಕ್ಷಿಯಾಗಿದೆ.

ನಾರಾಯಣನು ದೇವಾಲಯವನ್ನು ಕಟ್ಟಿಸಲು ಪ್ರಾರಂಭಿಸಿದ ಕೂಡಲೆ ಸುತ್ತಮುತ್ತಲಿನ ಗ್ರಾಮ ಭಕ್ತರೆಲ್ಲರು ಬಂದು ದೇವಾಲಯ ನಿರ್ಮಾಣದ ಕಾರ್ಯದಲ್ಲಿ ಕೂಡಿಕೊಂಡರು. ದೊಡ್ಡ ದೊಡ್ಡ ಕಲ್ಲುಗಳನ್ನು ಕುದುರೆ ಒಂಟೆಗಳಿಂದ ಎಳೆದು ತಂದರು. ನಾರಾಯಣನೇ ದೇವಾಲಯದ ನಕ್ಷೆಯನ್ನು ಸಿದ್ಧಗೊಳಿಸಿ ಮೇಲ್ವಿಚಾರಕವಾಗಿ ನಿಂತುಕೊಂಡನು. ಅದಕ್ಕೆ ಬೇಕಾದ ಹಣವನ್ನು ಯಾವುದೇ ವಿಳಂಬವಿಲ್ಲದೆ ಅತ್ಯಂತ ಉತ್ಸಾಹದಿಂದ ನೀಡಿದನು. ಹೀಗೆ ಹಲವಾರು ತಿಂಗಳುಗಳ ಕಾಲ ದೇವಾಲಯ ಮುಗಿಯುವವರೆಗೆ ತಾನೇ ಮುಂದಾಳತ್ವವನ್ನು ವಹಿಸಿ ನಾರಾಯಣ ಸಾಹುಕಾರನು ದೇವಾಲಯವನ್ನು ಪೂರ್ಣಗೊಳಿಸಿದನು.

**ದೇವಾಲಯದ ವಾಸ್ತುಶಿಲ್ಪ:** ದರಿದೇವರ ದೇವಾಲಯವು ಅತ್ಯಂತ ವಿಶಿಷ್ಟವಾದ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಹದಿಮೂರನೆಯ ಶತಮಾನದಲ್ಲಿ ಮಹಾರಾಷ್ಟ್ರದ ಯಾದವರ ಕಾಲದಲ್ಲಿ ಬೆಳೆದು ಬಂದ ಹೇಮಾಡ ಪಂಥದ ಶೈಲಿಯಲ್ಲಿ ಈ ದೇವಾಲಯವು ನಿರ್ಮಾಣಗೊಂಡಿದೆ. ಹೇಮಾಡ ಎನ್ನುವವನು ಯಾದವರ ಮಂತ್ರಿಯಾಗಿದ್ದನು. ಕಲೆ, ವಾಸ್ತುಶಿಲ್ಪಕ್ಕೆ ಅತ್ಯಂತ ಹೆಚ್ಚಿನ ಆದ್ಯತೆಯನ್ನು ನೀಡಿದ. ಈ ಮಂತ್ರಿಯ ಹೆಸರಿನಲ್ಲಿಯೇ ಹೇಮಾಡ ಪಂಥ ಎನ್ನುವುದು ಬೆಳೆದು ಬಂದಿದೆ. ಮಹಾರಾಷ್ಟ್ರದ ಬಹಳಷ್ಟು ಕಡೆಗೆ ಈ ಪಂಥೀಯ ದೇವಾಲಯಗಳು ನಿರ್ಮಾಣವಾಗಿರುವುದನ್ನು ಕಾಣಬಹುದಾಗಿದೆ.

**ದ್ವಾರಮಂಟಪಗಳು:** ದರಿದೇವರ ದೇವಾಲಯದ ಮುಖ್ಯವಾದ ಆಕರ್ಷಣೆ ಇಲ್ಲಿ ದ್ವಾರ ಮಂಟಪಗಳು. ಬೃಹದಾಕೃತಿಯಲ್ಲಿ ನಿರ್ಮಾಣಗೊಂಡ ಒಟ್ಟು ಮೂರು ದ್ವಾರಬಾಗಿಲುಗಳನ್ನು ಮೂರು ಹಂತದಲ್ಲಿ ನಿರ್ಮಾಣಮಾಡಲಾಗಿದೆ. ಈ ಮೂರು ಹಂತಗಳು ಪಾತಾಳ, ಭೂಮಿ, ಕೈಲಾಸ ಎನ್ನುವ ನಂಬಿಕೆಯು ಬೆಳದುಬಂದಿದೆ. ಸುಮಾರು ೩೦ ರಿಂದ ೩೫ ಫೂಟು ಎತ್ತರವಾಗಿ, ಸು. ೫ ರಿಂದ ೬ ಫೂಟು ಅಗಲವಾದ ಕಂಬಗಳು ಎರಡೂ ಬದಿಯಲ್ಲಿವೆ. ಮೇಲೆ ಮೇಲ್ಛಾವಣಿ ಇದ್ದು ಅದರ ಮೇಲೆ ಗೋಪುರವನ್ನು ಕಟ್ಟಲಾಗಿದೆ.

ಮೊದಲನೆಯ ದ್ವಾರಬಾಗಿಲವು ಗುಡ್ಡದ ತುದಿಯಿಂದ ಸುಮಾರು ೨೦೦ ಫೂಟು ಕೆಳಗೆ ಹಳ್ಳದಲ್ಲಿ ನಿರ್ಮಾಣ ಮಾಡಲಾಗಿದೆ. ಈ ದ್ವಾರಬಾಗಿಲದ ಎರಡೂ ಬದಿಗೆ ದೀಪಸ್ತಂಭಗಳನ್ನು ಸ್ಥಾಪಿಸಲಾಗಿದೆ. ದ್ವಾರಬಾಗಿಲದ ಮೇಲ್ಛಾಚಣಿಯನ್ನು ಗಚ್ಚಿನಿಂದ ನಿರ್ಮಿಸಲಾಗಿದ್ದು, ನಾಲ್ಕು ದಿಕ್ಕಿಗೆ ಸಣ್ಣ ಗಾತ್ರದ ಕಮಾನುಗಳ ಆಕಾರದಲ್ಲಿ ನಿರ್ಮಿಸಲಾಗಿದೆ. ಈ ಕಮಾನುಗಳು ಪ್ರತಿಯೊಂದು ದಿಕ್ಕಿಗೆ ಮೂರು ಮೂರು ಇದ್ದು ಒಟ್ಟು ಹನ್ನೆರಡು ಕಮಾನುಗಳಿಂದ ಸುತ್ತುವರೆದಿದೆ. ಮೇಲ್ಛಾವಣಿಯ ಮೇಲೆ ಎರಡೂ ಬದಿಗೆ ದ್ವಾರಪಾಲಕರನ್ನು ಕೆತ್ತಲಾಗಿದೆ. ಅದರ ಮೇಲೆ ಗೋಪುರವಿದ್ದು ಅತ್ಯಂತ ಆಕರ್ಷಣೀಯವಾಗಿ ಕಂಡುಬರುತ್ತದೆ. ಮುಂದಿನ ಎರಡೂ ದ್ವಾರಬಾಗಿಲುಗಳನ್ನು ಇದೇ ಮಾದರಿಯಲ್ಲಿಯೇ ನಿರ್ಮಿಸಲಾಗಿದೆ. ಮೊದಲನೆಯ ದ್ವಾರಬಾಗಿಲ ಹಾಗೂ ಎರಡನೆಯ ದ್ವಾರಬಾಗಿಲುಗಳ ಮಧ್ಯದಲ್ಲಿ ಹಲವಾರು ಸಣ್ಣಸಣ್ಣ ದೇವಾಲಯಗಳನ್ನು ನಿರ್ಮಿಸಲಾಗಿದೆ. ಅದೇ ರೀತಿ ಎರಡನೇ ಹಾಗೂ ಮೂರನೇ ದ್ವಾರಬಾಗಿಲುಗಳ ಮಧ್ಯದಲ್ಲಿಯೂ ಕೆಲವು ಸಣ್ಣ ದೇವಾಲಯಗಳು ಕಂಡು ಬರುತ್ತವೆ. ಆದರೆ ಇವು ಮೂಲ ದೇವಾಲಯದ ನಿರ್ಮಾಣದಲ್ಲಿ ರಚನೆಗೊಂಡಂತವುಗಳಲ್ಲ ದೇವಾಲಯ ನಿರ್ಮಾಣದ ನಂತರದ ದಿನಗಳಲ್ಲಿ ರಚನೆಗೊಂಡಂತವುಗಳಾಗಿವೆ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

**ಗರ್ಭಗುಡಿ:** ದರಿದೇವರ ಗರ್ಭಗುಡಿಯು ಗುಡ್ಡಕ್ಕೆ ಹತ್ತಿಕೊಂಡು ನಿರ್ಮಾಣವಾಗಿದೆ. ಈಗಿನ ಗರ್ಭಗುಡಿಯೇ ದರಿದೇವರು ತಪಸ್ಸು ಮಾಡಿದ ಸ್ಥಳವೆಂದು ನಂಬಲಾಗಿದೆ. ಗರ್ಭಗುಡಿಯಲ್ಲಿ ಯಾವುದೇ ಮೂರ್ತಿಗಳಿಲ್ಲ. ಗುಡ್ಡದವರೆಗೆ ಹತ್ತಿಕೊಂಡ ಬಂಡೆಗಲ್ಲನ್ನೇ ದರಿದೇವರೆಂದು ಪೂಜೆ ಮಾಡಲಾಗುತ್ತದೆ. ಆ ಕಲ್ಲಿಗೆ ದರಿದೇವರ ಅಲಂಕಾರವನ್ನು ಮಾಡಿ ಅಶ್ವಾರೂಢ ತಾಮ್ರದ ದರಿದೇವರ ಚಿಕ್ಕಮೂರ್ತಿಯಿಟ್ಟು ಪೂಜೆ ಮಾಡಲಾಗುತ್ತದೆ. ಇಲ್ಲಿ ದರಿದೇವರು ಸಾಕಾರದಿಂದ ನಿರಾಕಾರನಾಗಿ ಗುಡ್ಡದಲ್ಲಿ ಲೀನವಾದನು ಎಂಬ ಪ್ರತೀತಿ ಇದೆ.

ಗರ್ಭಗುಡಿಯ ಅಕ್ಕಪಕ್ಕದಲ್ಲಿ ಎಡಗಡೆಯಲ್ಲಿ ಮಂಗಸೂಳಿ ಮಲ್ಲಯ್ಯನ ಮೂರ್ತಿ ಇದೆ. ಬಲಗಡೆಯ ಕೋಣೆಯಲ್ಲಿ ಲಕ್ಷ್ಮಿ ವಿಗ್ರಹವಿದೆ. ಅದರ ಪಕ್ಕದಲ್ಲಿ ದರಿದೇವರ ತೂಕುಮಂಚದ ಕೋಣೆಯನ್ನು ಕಾಣಬಹುದು.

ಗರ್ಭಗುಡಿಯ ಎದುರಿಗೆ ವಿಶಾಲವಾದ ಪ್ರಾಂಗಣವಿದ್ದು ಅಲ್ಲಿ ಮಂಗಲವಾದ್ಯಗಳನ್ನು ಇಟ್ಟು ದರಿದೇವರ ಪೂಜೆಯ ಸಂದರ್ಭದಲ್ಲಿ ನುಡಿಸುತ್ತಾರೆ.

ದೇವಾಲಯದ ಎದುರಿಗೆ ದೊಡ್ಡದಾದ ದೀಪಸ್ತಂಭವಿದೆ. ಜಾತ್ರೆಯ ಸಂದರ್ಭದಲ್ಲಿ ಇಲ್ಲಿ ದೀಪವನ್ನು ಬೆಳಗಿಸುತ್ತಾರೆ.

**ದೇವಾಲಯದ ಪರಿಸರ :** ಅತ್ಯಂತ ಬೃಹದಾಕಾರವಾಗಿ ನಿರ್ಮಾಣಗೊಂಡ ದರಿದೇವರ ದೇವಾಲಯದ ಪರಿಸರವು ವಿಶಿಷ್ಟವಾಗಿ ಕಂಡುಬರುತ್ತದೆ. ಮೊದಲನೆಯ ದ್ವಾರಬಾಗಿಲಿನಿಂದ ಮೂರನೆಯ ದ್ವಾರಬಾಗಿಲದವರೆಗೆ ಹಲವಾರು ದೇವಾಲಯಗಳು ಕಂಡುಬರುತ್ತದೆ. ಅವುಗಳೆಂದರೆ, ನಾರಾಯಣನ ದೇವಾಲಯ. ಗರ್ಭಗುಡಿಯ ಎದುರಿಗೆ ಒಂದು ಚಿಕ್ಕದಾದ ಕಲ್ಲಿನ ದೇವಾಲಯವಿದೆ. ಈ ದೇವಾಲಯವು ನಾರಾಯಣನ ದೇವಾಲಯವೆಂದು ಕರೆಯುತ್ತಾರೆ. ದರಿದೇವರ ದೇವಾಲಯವನ್ನು ಕಟ್ಟಿಸಿದ ಇಂದಾಪೂರದ ನಾರಾಯಣ ಸಾಹುಕಾರನ ದೇವಾಲಯವೇ ಇದಾಗಿದೆ. ಬಹುಶಃ ಇದನ್ನು ನಾರಾಯಣನ ನಂತರ ಯಾರಾದರೂ ಕಟ್ಟಿಸಿರಬಹುದಾಗಿದೆ.

ದರಿದೇವರ ದೇವಾಲಯವನ್ನು ಕಟ್ಟುವುದು ಸಾಮಾನ್ಯನಿಗೆ ಸಾಧ್ಯವಾಗದ ಮಾತು. ಇಂತಹ ಬೃಹತ್ ದೇವಾಲಯವನ್ನು ಕಟ್ಟಿಸಿದ ನಾರಾಯಣನನು ಜನರ ಮನದಲ್ಲಿ ಭಕ್ತಿಯ ಭಾವವನ್ನೇ ಮೂಡಿಸಿದ್ದಾನೆ. ಮನುಷ್ಯರಿಂದ ಸಾಧ್ಯವಾಗದ್ದು ಜರುಗಿದಾಗ ಅದನ್ನು ದೈವತ್ವಕ್ಕೆ ಹೋಲಿಸುವುದು ಮನುಷ್ಯರ ಸ್ವಭಾವವಾಗಿದೆ. ಹೀಗೆ ನಾರಾಯಣನನು ದೈವತ್ವವನ್ನು ಪಡೆದುಕೊಂಡಿದ್ದರಿಂದಲೇ ಇಂತಹ ದೇವಾಲಯವನ್ನು ಕಟ್ಟಿಸಲು ಸಾಧ್ಯವಾಯಿತೆನ್ನುವ ನಂಬುಗೆ ಆತನನ್ನು ದೇವರ ಸ್ವರೂಪದಲ್ಲಿ ಕಾಣಲಾಗುತ್ತದೆ ಅಥವಾ ನಾರಾಯಣನು ತನ್ನ ಕೊನೆಯ ದಿನಗಳನ್ನು ದರಿದೇವರ ದೇವಾಲಯದಲ್ಲಿಯೇ ಕಳೆದಿರಬಹುದಾಗಿದೆ. ಅವನ ಸಮಾಧಿ ಮಾಡಿದ ಸ್ಥಳದಲ್ಲಿ ದೇವಾಲಯವು ನಿರ್ಮಾಣಗೊಂಡಿರಬಹುದಾದ ಸಾಧ್ಯತೆಗಳಿವೆ. ದೇವಾಲಯವನ್ನು ಕಟ್ಟಿಸಿದವನು ದೇವಾಲಯವು ಅದೇ ದೇವಾಲಯದ ಹತ್ತಿರ ಪೂಜೆಗೊಳ್ಳುತ್ತಿರುವುದು ತೀರ ಅಪರೂಪದ ಪ್ರಸಂಗವಾಗಿದೆ. ಈ ದೇವಾಲಯ ಒಳಗಡೆ ಕೈ ಮುಗಿದು ಕೊಂಡು ನಿಂತಿರುವ ಕಲ್ಲಿನ ಮೂರ್ತಿ ಇದೆ. ಸುಮಾರು ಮೂರು ಫೂಟಿನಷ್ಟು ಎತ್ತರವಾಗಿರುವ ಈ ಮೂರ್ತಿಯು ಪ್ರಾಚೀನಕಾಲದ್ದಾಗಿದೆ.

**ಗಣಪತಿ ದೇವಾಲಯ:** ನಾರಾಯಣ ದೇವಾಲಯದ ಪಕ್ಕದಲ್ಲಿ ಗರ್ಭಗುಡಿಯ ಎದುರಿಗೆ ಗಣಪತಿಯ ದೇವಾಲಯವನ್ನು ಕಾಣಬಹುದು. ದೇವಾಲಯವು ಚಿಕ್ಕದಾದ ಗೋಪುರವನ್ನು ಹೊಂದಿದ್ದು, ಒಳಗೆ ಗರ್ಭಗುಡಿಯಲ್ಲಿ ಗಣಪತಿಯ ವಿಗ್ರಹವಿದೆ. ಕುಳಿತ ಭಂಗಿಯಲ್ಲಿರುವ ಈ ವಿಗ್ರಹವು ಅತ್ಯಂತ ಆಕರ್ಷಣೀಯವಾಗಿದೆ. ಕಪ್ಪುಮಿಶ್ರಿತ ಕಂದು ಬಣ್ಣದ ಕಲ್ಲಿನಲ್ಲಿ ಕೆತ್ತಲ್ಪಟ್ಟ ಗಣಪತಿಯ ಹನ್ನೆರಡೂ ಕಾಲುಗಳನ್ನು ಮಡಚಿ ಕುಳಿತಿದ್ದಾನೆ. ಇದೂ ಕೂಡ ಹಳೆಯ ಕಾಲದ ಕೆತ್ತನೆಯನ್ನು ಹೊಂದಿದೆ.

**ಹನುಮಂತ ದೇವಾಲಯ:** ಗಣಪತಿಯ ಪಕ್ಕದಲ್ಲಿ ಹನುಮಂತದೇವರ ದೇವಾಲಯವು ಕಂಡುಬರುತ್ತದೆ. ಕಪ್ಪುಕಲ್ಲಿನಲ್ಲಿ ನಿಂತ ಭಂಗಿಯಲ್ಲಿರುವ ಹನುಮಂತನ ಮೂರ್ತಿಯು ಅತ್ಯಾಕರ್ಷಕವಾಗಿದೆ. ಕನಮಡಿಯ ಗ್ರಾಮದಲ್ಲಿಯ ಸುಂದರವಾದ ಹನುಮಂತನ ವಿಗ್ರಹವಿದೆ.

ಸಾಮಾನ್ಯವಾಗಿ ಹಿಂದೂ ಶೈವ ಸಂಪ್ರದಾಯದಲ್ಲಿ ಹನುಮಂತನ ದೇವಾಲಯಗಳನ್ನು ಮುಖ್ಯ ದೇವಾಲಯದ ಅಕ್ಕಪಕ್ಕದಲ್ಲಿ ನಿರ್ಮಿಸುವುದು ಕಂಡುಬರುತ್ತದೆ. ಹನುಮಂತ ವೀರತ್ವದ ಸಂಕೇತ. ಆತನನ್ನು ರಕ್ಷಕನೆಂದು ಜನರು ನಂಬುತ್ತಾರೆ. ಹೀಗಾಗಿ ಹನುಮಂತ ದೇವನನ್ನು ಆರಾಧಿಸುವುದು ಕಂಡುಬರುತ್ತದೆ. ಈ ದೇವಾಲಯವು ಗೋಪುರವನ್ನು ಹೊಂದಿದೆ.

**ಸೂಲಪ್ಪನ ದೇವಾಲಯ:** ಸೂಲಪ್ಪನು ದರಿದೇವರನ್ನು ಪ್ರತಿನಿತ್ಯ ಪೂಜೆ ಮಾಡುವ ಪೂಜಾರಿಯಾಗಿದ್ದಾನೆ. ದೇವರ ಪೂಜೆಯನ್ನು ಮಾಡುವ ಪೂಜಾರಿಯ ದೇವಾಲಯವಿರುವುದು ಇಲ್ಲಿಯ ವೈಶಿಷ್ಟ್ಯ. ಸೂಲಪ್ಪನು ದರಿದೇವರ ದೇವಾಲಯದಲ್ಲಿಯೇ ನಿತ್ಯವೂ ಪೂಜೆಯನ್ನು ಮಾಡುತ್ತ ಅಲ್ಲಿಯೇ ವಾಸ್ತವ್ಯವಿದ್ದನು ಎಂದು ನಂಬಲಾಗಿದೆ. ಅತ್ಯಂತ ಭಯಾನಕವಾದ ಗುಡ್ಡದಲ್ಲಿ ಒಬ್ಬನೇ ಇರುವುದು ಅದು ಸಾಹಸದ ಕಾರ್ಯ. ಹಗಲು ಹೊತ್ತಿನಲ್ಲಿಯೂ ಅಲ್ಲಿಗೆ ಬರಲು ಭಯಪಡುತ್ತಿದ್ದ ಜನರಿಗೆ ಸೂಲಪ್ಪ ವಿಶಿಷ್ಟವಾಗಿ ಕಾಣುತ್ತಾನೆ. ಹೀಗಾಗಿ ಭಕ್ತರ ಮನಸ್ಸಿನಲ್ಲಿ ಸೂಲಪ್ಪನ ಬಗೆಗೆ ಭಕ್ತಭಾವ ಮೂಡಿ ಆತನನ್ನು ಆರಾಧಿಸುತ್ತಿರುವುದು ವಿಶೇಷವಾಗಿದೆ. ಸೂಲಪ್ಪನು ದಿನನಿತ್ಯ ಪೂಜೆ ಮಾಡುತ್ತ ಜನರಿಗೆ ಆಧ್ಯಾತ್ಮ ಬೋಧನೆಯನ್ನು ಮಾಡುತ್ತಾ ಅಲ್ಲಿಯೇ ಉಳಿದಿದ್ದರಿಂದ ಅವನನ್ನು ಪೂಜ್ಯನೀಯವಾಗಿ ಖಂಡಿರಬಹುದಾಗಿದೆ. ಆದರೆ ಸೂಲಪ್ಪನ ಗುಡಿಯನ್ನು ಶೂಲಧರ ದೇವಾಲಯವೆಂದೂ ಕರೆಯುತ್ತಾರೆ. ಸೂಲಪ್ಪ ಎನ್ನುವುದು ಶೂಲಧರ ಎನ್ನುವುದರ ಅಪಬ್ರಂಶ ಪದವಾಗಿದೆ. ದರೆಪ್ಪ-ಸೂಲಪ್ಪ ಎಂದು ಗ್ರಾಮ್ಯಾ ಶಬ್ದಗಳಲ್ಲಿ ಕರೆಯುವ ವಾಡಿಕೆ ಬಂದಿರಬಹುದಾಗಿದೆ.

**ಹಿರೋಡೆ (ನಾಗದೇವ) ದೇವಾಲಯ:** ಸೂಲಪ್ಪದ ದೇವಾಲಯದ ಪಕ್ಕದಲ್ಲಿ ಹಿರೋಡೆ ದೇವರ ದೇವಾಲಯವಿದೆ. ಇಲ್ಲಿ ನಾಗಮೂರ್ತಿಯು ಪೂಜೆಗೊಳ್ಳುತ್ತದೆ. ನಾಗಶಿಲ್ಪಗಳು ಹೆಚ್ಚಾಗಿ ಹಿಂದೂ ದೇವಾಲಯದ ಅಕ್ಕಪಕ್ಕದಲ್ಲಿ ಪೂಜೆಗೊಳ್ಳುವುದು ಸಾಮಾನ್ಯವಾಗಿದೆ. ಈ ಭಾಗದಲ್ಲಿ ನಾಗದೇವನನ್ನು ಹಿರೋಡೆ ಎಂದೇ ಪೂಜಿಸಲಾಗುತ್ತದೆ. ಏಳು ಮಕ್ಕಳ ತಾಯಿ, ಹಿರೋಡೆ ಇವರೆಲ್ಲರನ್ನು ಹೆಚ್ಚಾಗಿ ಪೂಜಿಸಲಾಗುತ್ತದೆ. ಕಾಡುಪ್ರದೇಶವಾಗಿದ್ದರಿಂದ ಹಾವುಗಳ ಕಾಟ ಹೆಚ್ಚಾಗಿ ಅದರಿಂದ ತೊಂದರೆ ಅನುಭವಿಸಿ ನಾಗನನ್ನು ಪೂಜೆಮಾಡುವ ಸಂಪ್ರದಾಯವು ಬೆಳೆದು ಬಂದಿದೆ.

**ಮಹಾದೇವ ದೇವಾಲಯ:** ಗರ್ಭಗುಡಿಯ ಎದುರಿಗೆ ಇರುವ ದೇವಾಲಯಗಳಲ್ಲಿ ಮಹಾದೇವನ ದೇವಾಲಯವೂ ಒಂದಾಗಿದೆ. ಇದನ್ನು ಸೋಮನಾಥ ಈಶ್ವರಲಿಂಗವೆಂದು ಕರೆಯುತ್ತಾರೆ. ಸ್ಥಾವರಲಿಂಗಾಕೃತಿಯಲ್ಲಿರುವ ಇದು ಪ್ರಾಚೀನ ಕಾಲದ್ದಾಗಿದೆ.

**ಬಸವಣ್ಣ ದೇವಾಲಯ:** ಹರಿದೇವರ ದೇವಾಲಯದ ಪರಿಸರದಲ್ಲಿರುವ ಮತ್ತೊಂದು ಪ್ರಮುಖವಾದ ದೇವಾಲಯವೆಂದರೆ ಬಸವಣ್ಣನ ದೇವಾಲಯ. ಇದು ಎರಡು ಮತ್ತು ಮೂರನೆಯ ದ್ವಾರಬಾಗಿಲುಗಳ ಮಧ್ಯದಲ್ಲಿರುವ ಪ್ರಾಗಂಣದಲ್ಲಿದೆ. ಈ ದೇವಾಲಯವು ಉಳಿದವರೆಲ್ಲ ದೇವಾಲಯಗಳಿಗಿಂತ ದೊಡ್ಡದಾಗಿದೆ.

ಗರ್ಭಗುಡಿಯಲ್ಲಿ ನಂದಿಯ ವಿಗ್ರಹವಿದೆ. ದೇವಾಲಯದ ಮೇಲೆ ಗೋಪುರವನ್ನು ಕಾಣಬಹುದು. ಸಾಮಾನ್ಯವಾಗಿ ಇಲ್ಲಿರುವ ಎಲ್ಲ ದೇವಾಲಯಗಳು ಶೈವ ಸಂಪ್ರದಾಯದ ದೇವಾಲಯಗಳಾಗಿವೆ.

ನಾರಾಯಣ ಸಾಹುಕಾರನು ದರಿದೇವರ ದೇವಾಲಯವನ್ನು ಕಟ್ಟಿಸುವ ಪೂರ್ವದಲ್ಲಿ ಇಲ್ಲಿ ಯಾವುದಾದರೂ ಪ್ರಾಚೀನ ಅವಶೇಷಗಳು ಇರಬಹುದಾದ ಸಂಶಯ ಇಲ್ಲಿಯ ಪರಿಸರವನ್ನು ನೋಡಿದಾಗ ಕಂಡುಬರುತ್ತದೆ. ಅಥವಾ ನಾಥಪಂಥಿಯ ನೆಲೆಯಾಗಿರಬಹುದೇನೋ ಎಂಬ ಊಹೆಯನ್ನು ಮಾಡಬಹುದಾಗಿದೆ. ದರಿದೇವರ ದೇವಸ್ಥಾನದ ಹತ್ತಿರ ಐದಾರು ಕಿಲೋಮೀಟರ್ ಅಂತರದಲ್ಲಿ ಸಿದ್ಧನಾಥ ಎಂಬ ಊರಿದೆ. ಇಲ್ಲಿಯೂ ನಾಥಪಂಥಿಯ ಕುರುಹುಗಳು ಕಂಡುಬರುತ್ತವೆ.

**ಜಕ್ಕಮ್ಮದೇವಿಯ ದೇವಾಲಯ :** ದರಿದೇವರ ದೇವಾಲಯದ ಹತ್ತಿರ ಎರಡು ಜಕ್ಕವ್ವನ ದೇವಾಲಯಗಳು ಕಂಡು ಬರುತ್ತವೆ. ಒಂದು ಹಳ್ಳದ ಮಧ್ಯದಲ್ಲಿ ದೊಡ್ಡದಾದ ದೇವಾಲಯವಿದ್ದರೆ ಇನ್ನೊಂದು ದರಿದೇವರ ದೇವಾಲಯದ ಎರಡನೇ ದ್ವಾರಬಾಗಿಲದಿಂದ ಮುಂದೆ ಇದೆ.

ಹಳ್ಳದ ಮಧ್ಯದಲ್ಲಿರುವ ದೇವಾಲಯವು ದೊಡ್ಡದಿದೆ. ಇದನ್ನು ನಾರಾಯಣ ಸಾಹುಕಾರನೇ ಕಟ್ಟಿಸಿದನು ಎಂದು ನಂಬಲಾಗುತ್ತದೆ. ಜಕ್ಕವ್ವಳು (ಜಯದೇವಿ) ದುರಂತ ಸಾವನ್ನು ಕಂಡಬಳಿಕ ದರಿದೇವರು ತಂಗಿಯ ಮೇಲಿನ ಪ್ರೀತಿಗಾಗಿ ನನ್ನ ದರ್ಶನಕ್ಕೆ ಬರುವ ಜನರು ಮೊದಲು ತಂಗಿಯಾಗಿದ್ದ ಜಕ್ಕವ್ವನ ದರ್ಶನವನ್ನು ಮಾಡಿಕೊಂಡು ಬರಬೇಕೆಂದು ತಿಳಿಸುತ್ತಾನೆ. ಅದರಂತೆ ದರಿದೇವರ ದೇವಾಲಯಕ್ಕಿಂತ ಮೊದಲೇ ಸ್ವಲ್ಪ ದೂರದಲ್ಲಿ ಲಕ್ಕವ್ವನ ದೇವಾಲಯವನ್ನು ನಿರ್ಮಿಸಲಾಗಿದೆ. ದೇವಾಲಯದ ಸುತ್ತಲೂ ಹಳ್ಳವಿದ್ದು ಮಳೆಗಾಲದಲ್ಲಿ ನೀರು ನಿಲ್ಲುತ್ತದೆ. ಈ ಸ್ಥಳದಲ್ಲಿಯೇ ಲಕ್ಕವ್ವಳು ಆತ್ಮಹತ್ಯೆಯನ್ನು ಮಾಡಿಕೊಂಡಿರುವಳು ಎಂಬು ನಂಬಲಾಗುತ್ತದೆ. 'ಲಕ್ಕವ್ವಳ ಹಳ್ಳ ದರೆಪ್ಪನ ದರಿ' ಎಂದೇ ಇವೆರಡು ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಜಕ್ಕವ್ವಳ ದೇವಾಲಯದ ಮೇಲೆ ಗೋಪುರವು ವಿಶಿಷ್ಟವಾಗಿದೆ. ಒಟ್ಟು ಐದು ಹಂತದಲ್ಲಿ ನಿರ್ಮಾಣಗೊಂಡ ಈ ಗೋಪುರವು ಮಧ್ಯದಲ್ಲಿ ಕಮಾನುಗಳನ್ನು ಹೊಂದಿದೆ. ಮೇಲಿನ ತುದಿಗೆ ಕಳಸವನ್ನು ರಚಿಸಲಾಗಿದೆ. ಗೋಪುರದ ಮಧ್ಯದಲ್ಲಿ ಕೆಳಗಿನ ಬದಿಗೆ ಜಕ್ಕವ್ವಳ ಮೂರ್ತಿಯನ್ನು ಕೆತ್ತಲಾಗಿದೆ.

ಗರ್ಭಗುಡಿಯ ಒಳಗೆ ಮಹಾಸತಿ ಕಲ್ಲಿನ ಮಾದರಿಯಲ್ಲಿ ಯಕ್ಷಿಣಿಯರ ಚಿತ್ರವನ್ನು ಒಳಗೊಂಡ ಕಲ್ಲಿನ ಕೆತ್ತನೆಯ ಮೂರ್ತಿ ಇದೆ. ಜಕ್ಕಮ್ಮದೇವಿಯ ಮತ್ತೊಂದು ದೇವಾಲಯ ದರಿದೇವರ ದೇವಾಲಯದ ಎರಡನೆಯ ದ್ವಾರ ಬಾಗಿಲಿನ ಹತ್ತಿರವಿರುವ ಬಸವಣ್ಣ ದೇವಾಲಯದ ಪಕ್ಕದಲ್ಲಿದೆ. ಹಳ್ಳದ ಮಧ್ಯದಲ್ಲಿರುವ ಜಕ್ಕವ್ವನ ದೇವಾಲಯವು ಮಳೆಗಾಲದಲ್ಲಿ ನೀರಿನಿಂದ ತುಂಬಿಕೊಳ್ಳುವುದರಿಂದ ಅಲ್ಲಿ ಹೋಗಿ ಪೂಜೆ ಮಾಡಲು ಸಾಧ್ಯವಿಲ್ಲದ್ದರಿಂದ ಮತ್ತೊಂದು ಜಕ್ಕಮ್ಮದೇವಿಯ ದೇವಾಲಯವನ್ನು ದರಿದೇವರ ದೇವಾಲಯದ

ಹತ್ತಿರ ನಿರ್ಮಿಸಲಾಗಿದೆ. ಜಕ್ಕಮ್ಮಳ ಪೂಜೆ ಆಗದೆ ದರಿದೇವರ ಪೂಜೆ ನೆರವೇರದ್ದರಿಂದ ಮತ್ತೊಂದು ಜಕ್ಕಮ್ಮಳ ದೇವಾಲಯವನ್ನು ಕಟ್ಟಲಾಗಿದೆ. ಈಗ ಎರಡೂ ಕಡೆಗೆ ಪೂಜೆಯನ್ನು ದಿನನಿತ್ಯ ನೆರವೇರಿಸಲಾಗುತ್ತಿದೆ.

**ಮಸೂಬಾ ದೇವಾಲಯ:** ಹಳ್ಳದ ಜಕ್ಕಮ್ಮದೇವಿಯ ಪಕ್ಕದಲ್ಲಿ ಮಸೂಬಾ ದೇವಾಲಯವು ಕಂಡು ಬರುತ್ತದೆ. ಮಸೂಬಾ ಈತನು ದರಿದೇವರ ರಕ್ಷಕ ಎಂದು ನಂಬಲಾಗುತ್ತದೆ. ಬಹುಶಃ ಈತನು ದರಿದೇವರ ಜೊತೆಗಿದ್ದ ಸೈನಿಕನಾಗಿರಬಹುದಾಗಿದೆ.

**ನಗಾರಿಖಾನೆ** : ನಗಾರಿಖಾನೆಯನ್ನು ಮೂರನೆಯ ದ್ವಾರಬಾಗಿಲದ ಪಕ್ಕದಲ್ಲಿ ನಿರ್ಮಿಸಲಾಗಿದೆ. ಇದು ಮೂರು ಅಂತಸ್ತನ್ನು ಹೊಂದಿದೆ. ಮೊದಲು ಇಲ್ಲಿ ವಾದ್ಯಗಳನ್ನು ಇಟ್ಟು ನುಡಿಸುತ್ತಿದ್ದರು. ಈಗ ದೇವರ ಪಾಲಕಿಗಳನ್ನು ಇಡುತ್ತಾರೆ.

**ಕುದುರೆ ಕಟ್ಟುವ ಸ್ಥಳ:** ದರಿದೇವರ ದೇವಾಲಯದ ಪಕ್ಕದಲ್ಲಿಯೇ ಕುದುರೆಯನ್ನು ಕಟ್ಟಲು ಕಟ್ಟೆಯನ್ನು ಕಟ್ಟಲಾಗಿದೆ. ಕುದುರೆಯು ದರಿದೇವರ ವಾಹನ. ಇದಕ್ಕೆ ದರಿದೇವರ ಕುದುರೆಯೆಂದೇ ಕರೆಯಲಾಗುತ್ತದೆ. ಮೊದಲು ಕುದುರೆಯನ್ನು ಇಲ್ಲಿಯೇ ಕಟ್ಟಲಾಗುತ್ತಿತ್ತು. ಈಗ ಊರಿನ ((ಕನಮಡಿಯ) ಗೌಡರ ಮನೆಯಲ್ಲಿ ಕಟ್ಟಲಾಗುತ್ತದೆ. ಜಾತ್ರೆ ಮತ್ತು ವಿಶೇಷ ಸಂದರ್ಭಗಳಲ್ಲಿ ಕುದುರೆಯನ್ನು ದೇವಾಲಯಕ್ಕೆ ತರಲಾಗುತ್ತದೆ.

**ಚಂದ್ರ ಶಾಲೆಗಳು :** ದರಿದೇವರ ದೇವಾಲಯದ ಆವರಣದಲ್ಲಿ ಮತ್ತು ದೇವಾಲಯದ ಹೊರಗಿನ ಪ್ರದೇಶದಲ್ಲಿ ಹತ್ತಾರು ಚಂದ್ರಶಾಲೆಗಳನ್ನು ನಿರ್ಮಿಸಲಾಗಿದೆ. ಚಂದ್ರಶಾಲೆಗಳೆಂದರೆ ಭಕ್ತರು ತಾವು ದೇವಾಲಯಕ್ಕೆ ಬಂದಾಗ ಉಳಿದುಕೊಳ್ಳುವ ಸ್ಥಳ. ದರಿದೇವರ ದೇವಾಲಯವು ಕಾಡಿನ ಮಧ್ಯದಲ್ಲಿರುವುದರಿಂದ ಇಲ್ಲಿ ಬಂದವರಿಗೆ ಉಳಿದುಕೊಳ್ಳಲು ಯಾವುದೇ ವ್ಯವಸ್ಥೆ ಇಲ್ಲ. ಹೀಗಾಗಿ ದೇವಾಲಯಕ್ಕೆ ಖಾಯಂಆಗಿ ಬರುವವರು ತಮ್ಮ ತಮ್ಮ ಹೆಸರಿನಲ್ಲಿ ಈ ಚಂದ್ರಶಾಲೆಗಳನ್ನು ಕಟ್ಟಿಸಿರುತ್ತಾರೆ. ಜಾತ್ರೆ, ಶ್ರಾವಣಮಾಸ, ಕಾರ್ತಿಕಮಾಸ ಮುಂತಾದ ಸಂದರ್ಭಗಳಲ್ಲಿ ಇಲ್ಲಿಗೆ ಆಗಮಿಸಿದ ಭಕ್ತರು ಈ ಚಂದ್ರಶಾಲೆಗಳಲ್ಲಿ ಎರಡು-ಮೂರು ದಿನ ಉಳಿಯುತ್ತಾರೆ.

**ಮಾಲಗಂಬ (ಮಲ್ಲಖಂಭಾ) :** ದರಿದೇವರ ಗರ್ಭಗುಡಿಯನ್ನು ದಾಟಿ ಮೇಲಿರುವ ಗುಡ್ಡದಲ್ಲಿ ಚತುಷ್ಕೋನಾಕೃತಿಯಲ್ಲಿ ಬೃಹತ್ತಾದ ಮಾಲಗಂಬವನ್ನು ಸ್ಥಾಪಿಸಲಾಗಿದೆ. ಇದು ನೆಲದಿಂದ ಐದು ಹಂತಗಳಲ್ಲಿ ರಚನೆಗೊಂಡಿದೆ. ತಳಭಾಗದಲ್ಲಿ ದೊಡ್ಡದಾದ ಕಲ್ಲಿನ ಕಟ್ಟೆಯನ್ನು ನಿರ್ಮಿಸಲಾಗಿದ್ದು ಅದರ ಮೇಲೆ ಮಾಲಗಂಬವನ್ನು ಕಟ್ಟಲಾಗಿದೆ. ಒಳಗಿನ ಭಾಗ ಬೊಳಾಗಿದ್ದು ಗಟ್ಟಿಮುಟ್ಟಾದ ಗಚ್ಚು ಕಲ್ಲುಗಳನ್ನು ಉಪಯೋಗಿಸಿ ಕಟ್ಟಲಾಗಿದೆ. ಕಮಾನುಗಳಿಂದ ಪ್ರತಿಯೊಂದು ಹಂತವು ಸುತ್ತುವರೆದಿದೆ. ಮೇಲಿನ

ತುದಿಗೆ ದೀಪವನ್ನು ಇಡಲು ಚಪ್ಪಟೆಯಾಗಿ ಮಾಡಲಾಗಿದೆ. ಜಾತ್ರೆಯ ಸಂದರ್ಭದಲ್ಲಿ ಇಲ್ಲಿ ದೀಪವನ್ನು ಬೆಳಗಿಸಲಾಗುತ್ತದೆ. ದೇವಾಲಯದ ಇರುವಿಕೆಯು ದೂರದಿಂದ ಕಾಣುವಂತೆ ಈ ಮಾಲಗಂಬವನ್ನು ಸ್ಥಾಪಿಸಿರಬಹುದಾಗಿದೆ. ಗುಡ್ಡದ ವಾರೆಯಲ್ಲಿ ಇರುವ ಈ ದೇವಾಲಯಕ್ಕೆ ಬರಲು ಮೊದಲು ರಸ್ತೆ ಸೌಕರ್ಯವಿಲ್ಲದ್ದರಿಂದ ಗುಡ್ಡದೊಳಗಿಂದ ಕುದುರೆ, ಒಂಟೆ, ಚಕ್ಕಡಿಗಳ ಮೂಲಕವೇ ಜನರು ಬರುತ್ತಿದ್ದರು. ಹೀಗಾಗಿ ದೂರಿನಿಂದ ದೇವಾಲಯವು ಕಾಣುವಂತೆ ಈ ಮೂಲಗಂಬದ ಮೇಲೆ ದೀಪವನ್ನು (ಹಿಲಾಲ) ಹಚ್ಚುತ್ತಿದ್ದರು. ಕಮಾನುಗಳ ಮೇಲಿನ ಭಾಗದಲ್ಲಿ ಪ್ರಾಣಿ, ಪಶು, ಯಕ್ಷ, ಕಿನ್ನಾರರ ಮೂರ್ತಿಗಳನ್ನು ಕೆತ್ತಲಾಗಿದೆ.

ಒಟ್ಟಿನಲ್ಲಿ ದರಿದೇವರ ದೇವಾಲಯವು ವಿಶಿಷ್ಟವಾದ ಮಾದರಿಯಲ್ಲಿ ನಿರ್ಮಾಣಗೊಂಡಿದ್ದು, ಈ ಭಾಗದ ಪ್ರಮುಖ ದೇವಾಲಯಗಳಲ್ಲಿ ಒಂದಾಗಿದೆ. ಇಂದಾಪೂರದ ನಾರಾಯಣ ಸಾಹುಕಾರನಿಂದ ಕಟ್ಟಲ್ಪಟ್ಟಿದ್ದು ಎಂದು ನಂಬಲಾಗಿದ್ದರೂ ಇಲ್ಲಿಯ ಅವಶೇಷಗಳನ್ನು ಗಮನಿಸಿದಾಗ ಇದು ಜೀರ್ಣೋದ್ಧಾರಗೊಂಡಿರಬಹುದೆಂಬ ಸಂಶಯ ಮೂಡುತ್ತದೆ. ದರಿದೇವರ ಗುಡ್ಡವು ಪ್ರಾಚೀನ ಕಾಲದಿಂದಲೂ ಯೋಗಿಗಳ ತಾಣವಾಗಿರಬಹುದು. ಇಲ್ಲಿರುವ ಪರಿಸರವು ಯೋಗ, ಧ್ಯಾನಕ್ಕೆ ಅನುಕೂಲವಾಗಿದ್ದರಿಂದ ಇಲ್ಲಿಯ ಗವಿಗಳಲ್ಲಿ ಋಷಿಮುನಿಗಳು ನೆಲೆಸಿ ಯೋಗ ಸಾಧನೆಯನ್ನು ಮೂಡಿರಬಹುದಾಗಿದೆ. ನಾಥಪಂಥೀಯ ನೆಲೆಯಾಗಿದ್ದರ ಬಗೆಗೂ ಕೆಲವು ಕುರುಹುಗಳು ಇಲ್ಲಿ ಕಂಡು ಬರುತ್ತದೆ. ಪ್ರಾಚೀನ ಶೈವ ಸಂಪ್ರದಾಯದಲ್ಲಿ ಬರುವ ನಂದಿ, ಗಣೇಶ, ಶಿವಲಿಂಗ, ಶೂಲದ ಬ್ರಹ್ಮ ಮುಂತಾದವುಗಳು ಇದು ಶೈವ ಕೇಂದ್ರವಾಗಿದ್ದುದರ ಬಗೆಗೆ ಅನುಮಾನ ಬರುತ್ತದೆ.

ಇಲ್ಲಿಯ ಆಚರಣೆ ಸಂಪ್ರದಾಯಗಳು ಜೈನಧರ್ಮಕ್ಕಿಂತ ಅತೀ ಪ್ರಾಚೀನವಾದ ಶ್ರವ ಶಾಖೆಗಳಲ್ಲೊಂದಾದ ಭೈರವ ಶ್ರಾವದ ಆಚರಣೆ ಸಂಪ್ರದಾಯಗಳಿಗೆ ಹಿನ್ನೆಲೆಯಾಗಿ ಕಂಡು ಬರುತ್ತವೆ. ಈ ಎಲ್ಲ ಹಿನ್ನೆಲೆಯಲ್ಲಿ ದರಿದೇವರ ದೇವಾಲಯವು ವಿಶಿಷ್ಟ ಸಂಪ್ರದಾಯ ಆಚರಣೆಗಳನ್ನು ಹೊಂದಿ ವಿಭಿನ್ನ ಶೈಲಿಯಲ್ಲಿ ನಿರ್ಮಾಣಗೊಂಡು ಈ ಭಾಗದ ಪ್ರಮುಖ ದೇವಾಲಯಗಳಲ್ಲಿ ಒಂದಾಗಿತೋರುತ್ತದೆ.

**ಗಡಿಸಮಸ್ಯೆ ಮತ್ತು ದರಿದೇವರು:**

ಕರ್ನಾಟಕ–ಮಹಾರಾಷ್ಟ್ರದ ಗಡಿಸಮಸ್ಯೆಯ ಪ್ರಭಾವ ದರಿದೇವರಿಗೂ ತಟ್ಟಿದ್ದು ಈ ದೇವಾಲಯದ ಮತ್ತೊಂದು ವೈಶಿಷ್ಟ್ಯವಾಗಿದೆ.

ದರಿದೇವರ ದೇವಾಲಯವು ಕನಮಡಿ ಮತ್ತು ಮುಚ್ಚಂಡಿ ಗ್ರಾಮಗಳ ಮಧ್ಯದಲ್ಲಿರುವ ಗುಡ್ಡದಲ್ಲಿದೆ. ದೇವಾಲಯದಿಂದ ಎರಡೂ ಊರುಗಳು ಹೆಚ್ಚು ಕಡಿಮೆ ಒಂದೇ ಅಂತರದಲ್ಲಿದೆ. ಆದರೆ ದರಿದೇವರು ಮುಚ್ಚಂಡಿ ಗ್ರಾಮಕ್ಕೆ ಸಂಬಂಧಪಟ್ಟವನು. ಹೀಗಾಗಿ ಮುಚ್ಚಂಡಿ ದರಿದೇವರೆಂದೇ ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದಾನೆ.

ದರಿದೇವರ ಜೀವನವನ್ನು ನೋಡಿದಾಗ ಕನಮಡಿಗಿಂತ ಮುಚ್ಚಂಡಿಯೇ ಹೆಚ್ಚು ಸಂಬಂಧವನ್ನು ಹೊಂದಿದೆ. ದರಿದೇವರ ಜನ್ಮಸ್ಥಳವೆಂದು ನಂಬಲಾದ ತುಪ್ಪಹಟ್ಟಿಯು ಮಚ್ಚಂಡಿಯ ಪಕ್ಕದಲ್ಲಿಯೇ ಇರುವುದರ ಕುರುಹುಗಳು ಕಂಡು ಬರುತ್ತದೆ. ದರಿದೇವರು ತನ್ನ ಬಾಲ್ಯ, ಯೌವ್ವನವನ್ನು ಕಳೆದದ್ದು ಮುಚ್ಚಂಡಿಯಲ್ಲಿಯೇ ಅಲ್ಲದೆ ದರಿದೇವನ ಗುರುಗಳು ನೆಲೆಸಿದ ಊರು ಮುಚ್ಚಂಡಿಯಾಗಿದೆ. ಹೀಗಾಗಿ ಮುಚ್ಚಂಡಿಯೇ ದರಿದೇವನ ಊರು ಎನ್ನುವುದು ಸ್ಪಷ್ಟವಾಗಿದೆ.

ಆದರೆ ಈಗ ದರಿದೇವರ ದೇವಾಲಯವು ಕನಮಡಿ ಗ್ರಾಮಕ್ಕೆ ಸೇರಿಕೊಂಡಿದೆ. ಇದಕ್ಕೆ ಕಾರಣ ಮಹಾಜನ ಆಯೋಗದ ಶಿಫಾರಸು. ೧೯೬೭ರ ಮಹಾಜನ ಆಯೋಗದ ಶಿಫಾರಸ್ಸಿನಂತೆ ಮುಚ್ಚಂಡಿಯು ಮಹಾರಾಷ್ಟ್ರಕ್ಕೆ ಸೇರಿತು. ಇದು ಅಚ್ಚ ಕನ್ನಡ ಪ್ರದೇಶವಾಗಿದ್ದರೂ ಅದು ಮಹಾರಾಷ್ಟ್ರಕ್ಕೆ ಸೇರಿತು. ಮಹಾರಾಷ್ಟ್ರ ಮತ್ತು ಕರ್ನಾಟಕದ ಗಡಿರೇಖೆಯನ್ನು ಗುರುತಿಸುವಾಗ ದರಿದೇವರ ಗುಡ್ಡದ ಹಳ್ಳದ ಭಾಗವನ್ನು ಸೀಮಾರೇಖೆಯಾಗಿಟ್ಟುಕೊಂಡು ಈ ಪ್ರದೇಶವನ್ನು ವಿಭಜಿಸಲಾಯಿತು. ಹೀಗಾಗಿ ಮುಚ್ಚಂಡಿಯು ಮಹಾರಾಷ್ಟ್ರಕ್ಕೆ ಸೇರಿತು. ಈಗ ಇದು ಸಾಂಗಲಿ ಜಿಲ್ಲೆಯ ಜತ್ತ ತಾಲೂಕಿನ ಕೊನೆಯ ಹಳ್ಳಿಯಾಗಿದೆ.

ದರಿಗುಡ್ಡದ ಹಳ್ಳದ ಬಲಭಾಗವು ಕರ್ನಾಟಕಕ್ಕೆ ಸೇರಿತು. ಹೀಗಾಗಿ ದರಿದೇವರ ದೇವಾಲಯವು ಕರ್ನಾಟಕದಲ್ಲಿ ಉಳಿಯಿತು. ಈ ದೇವಾಲಯಕ್ಕೆ ಸಮೀಪದ ಹಳ್ಳಿಯೆಂದರೆ ಕನಮಡಿ. ಹೀಗಾಗಿ ಮುಚ್ಚಂಡಿ ದರೆಪ್ಪನು ಕನಮಡಿ ದರೆಪ್ಪನಾದನು.

ಆದರೆ ಈಗಲೂ ಮುಚ್ಚಂಡಿ ದರಿದೇವರು ಎಂದೇ ಜನರು ಕರೆಯುತ್ತಾರೆ. ಮಹಾಜನ ಆಯೋಗವು ದರಿದೇವರನ್ನು ಭೌಗೋಳಿಕವಾಗಿ ಒಂದು ರಾಜ್ಯಕ್ಕೆ ವರ್ಗಾಯಿಸಿದ್ದರೂ ಇಲ್ಲಿರುವ ಸಂಸ್ಕೃತಿಯು ಎರಡೂ ರಾಜ್ಯಗಳ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದೆ.



## ಅಧ್ಯಾಯ : ಐದು

# ಸಾಹಿತ್ಯದಲ್ಲಿ ದರಿದೇವರು

ಸಾಹಿತ್ಯ ಜೀವನದ ಪ್ರತಿಬಿಂಬ. ಒಂದು ಪ್ರದೇಶದ ನಾಡಿನ ದೇಶದ ಸಂಪೂರ್ಣ ಸಂಸ್ಕೃತಿಯನ್ನು ಅರಿಯಲು ಅಲ್ಲಿ ರಚನೆಗೊಂಡ ಸಾಹಿತ್ಯವು ಮಹತ್ವದ ಆಕರವಾಗುತ್ತದೆ. ಅದು ಜನಪದ ಸಾಹಿತ್ಯವೇ ಆಗಿರಬಹುದು ಅಥವಾ ಶಿಷ್ಟ ಸಾಹಿತ್ಯವೇ ಆಗಿರಬಹುದು ಅದರಲ್ಲಿ ಹಲವಾರು ವಿಷಯಗಳು ನಿರೂಪಿತಗೊಂಡಿರುತ್ತವೆ.

ದರಿದೇವರನ್ನು ಕುರಿತು ರಚನೆಗೊಂಡ ಸಾಹಿತ್ಯವು ಮುಖ್ಯವಾಗಿ ಜಾನಪದ ಕಥೆಗಳ ರೂಪದಲ್ಲಿ ದೊರೆಯುತ್ತದೆ ಮತ್ತು ಇತ್ತೀಚೆಗೆ ರಚನೆಗೊಂಡ ಸ್ತುತಿ, ಮಂಗಳಾರತಿ ಪದಗಳು, ಕವನಗಳಲ್ಲಿ ದರಿದೇವರ ಜೀವನ-ಸಾಧನೆಗಳನ್ನು ಆತನ ಮಹಿಮೆಯನ್ನು ಚಿತ್ರಿಸಲಾಗಿದೆ.

ದರಿದೇವರು ಜೀವಿಸಿದ್ದು ಸುಮಾರು ಹದಿನೈದು ಹದಿನಾರನೆಯ ಶತಮಾನದಲ್ಲಿ ಆದರೆ ಆತನ ಜೀವನ ಸಾಧನೆಗಳನ್ನು ಕುರಿತು ಇದುವರೆಗೆ ಯಾವ ಪ್ರಾಚೀನ ಕೃತಿಗಳೂ ಲಭ್ಯವಾಗಿಲ್ಲ. ಇತ್ತೀಚೆಗೆ ಸ್ಥಳೀಯ ಆಸಕ್ತರು ಕಿರುಹೊತ್ತಿಗೆಗಳನ್ನು ರಚಿಸಿದ್ದಾರೆ. ಆದರೆ ಇವುಗಳಲ್ಲಿ ಬರುವ ಸಾಹಿತ್ಯವು ಜಾನಪದ ಕಥೆಗಳ ಹಿನ್ನೆಲೆಯಲ್ಲಿಯೇ ಮೂಡಿಬಂದಿದೆ. ಈ ಕಥೆಗಳಲ್ಲಿ ಪೌರಾಣಿಕ ಅಂಶವೂ ಕೂಡಿಕೊಂಡಿದೆ. ದರಿದೇವರ ಮೇಲೆ ರಚನೆಗೊಂಡ ಇತ್ತೀಚಿನ ಕವನಗಳಲ್ಲಿಯೂ ಕೂಡ ಇದೇ ಅಂಶವನ್ನು ಕಾಣಬಹುದು. ಈ ಕವನಗಳು ಒಂದು ರೀತಿಯಲ್ಲಿ ಸ್ತುತಿ ಗೀತೆಗಳೇ ಆಗಿವೆ. ಒಟ್ಟಿನಲ್ಲಿ ದರಿದೇವರ ಮೇಲೆ ರಚನೆಗೊಂಡ ಸಾಹಿತ್ಯವು ಆತನ ಜೀವನ, ಮಹಿಮೆಗಳನ್ನು ತಿಳಿಸಿಕೊಡುತ್ತದೆ. ಇದರಲ್ಲಿ ಕೆಲವು ಚಾರಿತ್ರಿಕ ಅಂಶಗಳು ಕಂಡುಬಂದರೂ ಅವು ಚರಿತ್ರೆಗೆ ಹೊಂದಿಕೊಳ್ಳುವುದಿಲ್ಲ. ಹೀಗಾಗಿ ದರಿದೇವರನ್ನು ಜಾನಪದೀಯ

ಹಿನ್ನೆಲೆಯಲ್ಲಿಯೇ ಅಧ್ಯಯನ ಮಾಡುವುದು ಹೆಚ್ಚು ಸಮಂಜಸವಾಗಿ ಕಂಡುಬರುತ್ತದೆ.

ದರಿದೇವರನ್ನು ಕುರಿತು ರಚನೆಗೊಂಡ ಒಟ್ಟು ಸಾಹಿತ್ಯವನ್ನು ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದು.

೧. ದಂತ ಕಥೆಗಳು

೨. ಸ್ತುತಿ ಗೀತೆಗಳು

**೧. ದಂತ ಕಥೆಗಳು :** ದರಿದೇವರನ್ನು ಕುರಿತು ಪ್ರಚಲಿತವಿರುವ ಕಥೆಗಳಲ್ಲಿ ಹಲವಾರು ಪ್ರಾದೇಶಿಕ ಭಿನ್ನತೆಗಳು ಕಂಡುಬರುತ್ತವೆ. ದರಿದೇವರಿಗೆ ಸಂಬಂಧಿಸಿದಂತೆ ಆತನ ಚರಿತ್ರೆಯಲ್ಲಿ ಬರುವ ರಾಹುತರಾಯನ ಬಗೆಗೆ ಎರಡು ವಿಭಿನ್ನ ಕಥೆಗಳು ಹುಟ್ಟಿಕೊಂಡಿವೆ. ಮೊದಲನೆಯದಾಗಿ ದರಿದೇವರ ಚರಿತ್ರೆಯನ್ನೇ ಮುಖ್ಯವಾಗಿಟ್ಟುಕೊಂಡು ಹುಟ್ಟಿಕೊಂಡ ಕತೆಗಳಲ್ಲಿ ದರಿದೇವರು ಮತ್ತು ರಾಹುತರಾಯನಿಗೆ ಯುದ್ಧ ನಡೆಯುತ್ತದೆ. ಆ ಯುದ್ಧದಲ್ಲಿ ರಾಹುತರಾಯನ ಕುದುರೆಯ ಬಾಲವನ್ನು ದರಿದೇವರು ಕತ್ತರಿಸಿದ್ದರಿಂದ ಆತನ ಕುದುರೆಯು ಭಯ; ನೋವಿನಿಂದ ಜೋರಾಗಿ ಓಡಿ ಕಾಡಿನಲ್ಲಿ ಮರೆಯಾಗುತ್ತದೆ. ದರಿದೇವರು ರಾಹುತರಾಯನನ್ನು ಎಷ್ಟೇ ಹುಡುಕಿದರೂ ಆತನು ಸಿಗುವುದಿಲ್ಲ. ಆಗ ಧರಿದೇವರು ತನ್ನ ತಂಗಿ ಜಯದೇವಿಯನ್ನು ಕೂಡಿಕೊಳ್ಳಲು ಮೊದಲು ಯುದ್ಧ ಮಾಡುತ್ತಿದ್ದ ಸ್ಥಳಕ್ಕೆ ತಿರುಗಿ ಬರುತ್ತಾನೆ. ಆದರೆ ಆತನು ತಿರುಗಿ ಬರುವಷ್ಟರಲ್ಲಿ ನನ್ನ ಅಣ್ಣನು ಯುದ್ಧ ಬೇಡವೆಂದು ಹೇಳಿದರೂ ನನ್ನ ಮಾತಿಗೆ ಬೆಲೆ ಕೊಡದೆ ಯುದ್ಧ ಮುಂದುವರಿಸಿದ್ದಕ್ಕೆ ಮನನೊಂದು ಜಯದೇವಿಯು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದರಿಂದ ದರಿದೇವರಿಗೆ ಜೀವನದಲ್ಲಿ ವೈರಾಗ್ಯಮೂಡಿ ಧ್ಯಾನ, ತಪಸ್ಸು, ಯೋಗ ಸಾಧನೆಯಿಂದ ದೈವತ್ವವನ್ನು ಪಡೆಯುತ್ತಾನೆ. ದರಿದೇವರು ಈ ಮೊದಲೇ ತನ್ನ ಜನೋಪಕಾರಿ ಕಾರ್ಯಗಳಿಂದ ಜನರ ಪ್ರೀತಿಗೆ ಪಾತ್ರನಾಗಿದ್ದನು. ಈಗ ತಪಸ್ಸನ್ನು ಆಚರಿಸಿ ಯೋಗಿಯಂತೆ ಕಂಡಾಗ ಆತನನ್ನು ದೇವತಾ ಸ್ವರೂಪದಲ್ಲಿ ಕಾಣುತ್ತಾರೆ. ಅಲ್ಲದೆ ಆತನಲ್ಲಿದ್ದ ಮಾನವೀಯ ಗುಣಗಳು, ಆದರ್ಶಗಳು, ಕ್ಷಮಾಗುಣ ಇವೆಲ್ಲವೂ ಆತನ ಹಿರಿಮೆಯನ್ನೂ ಹೆಚ್ಚಿಸುತ್ತವೆ. ಎರಡನೆಯಾಗಿ ದರಿದೇವರು ಮತ್ತು ರಾಹುತರಾಯನ ನಡುವೆ ನಡೆದ ಯುದ್ಧವನ್ನು ದೇವರ ಹಿಪ್ಪರಿಗೆಯ ಭಾಗದಲ್ಲಿ ಬೇರೆಯಾಗಿಯೇ ಚಿತ್ರಿಸಲಾಗಿದೆ. ರಾಹುತರಾಯನು ದೇವರ ಹಿಪ್ಪರಿಗೆಯವನಾಗಿದ್ದರಿಂದ ಆ ಭಾಗದ ಜನರು ಆತನನ್ನು ನಾಯಕನ ಪಾತ್ರದಲ್ಲಿ ಚಿತ್ರಿಸಿದ್ದಾರೆ. ಸಾಹಿತ್ಯದಲ್ಲಿ ಇದು ತೀರ ಸಾಮಾನ್ಯವಾದದ್ದು. ತಮ್ಮ ನಾಯಕನನ್ನು ಸುತ್ತಿಸುವುದು, ಹೊಗಳುವುದು, ಆತನನ್ನೇ ನಾಯಕನನ್ನಾಗಿ ಮಾಡುವುದು ಇದು ಸಹಜವಾದುದ್ದಾಗಿದೆ. ಈ ಹಿನ್ನೆಲೆಯಲ್ಲಿ ರಾಹುತರಾಯನ ಕತೆಯು ಈ ರೀತಿಯಾಗಿ ಮೂಡಿಬಂದಿದೆ.

ಮಲ್ಲಯ್ಯ ಮತ್ತು ರಾಹುತರಾಯ ಇಬ್ಬರು ಪ್ರಾಣಸ್ನೇಹಿತರು. ಹಿಪ್ಪರಿಗೆಯ ರಾಜನಾದ ಮಲ್ಲಯ್ಯನಿಗೆ ಮುಚ್ಚಂಡಿ ಗುಡ್ಡದ ದರೆಪ್ಪ ಪದೇ ಪದೇ ತೊಂದರೆಪಡಿಸುತ್ತಿದ್ದನು. ಇದನ್ನು ಸಹಿಸದ ಮಲ್ಲಯ್ಯ ತನ್ನ ಪ್ರಾಣ ಸ್ನೇಹಿತನಾದ ರಾಹುತರಾಯನ ಸಹಾಯವನ್ನು ಯೋಚಿಸುತ್ತಾನೆ. ಆಗ ರಾಹುತರಾಯನು ಮಲ್ಲಯ್ಯನಿಗೆ "ನನಗೆ ಬೇಡಿದ್ದು ಕೊಡುತ್ತೇನೆಂದು ವಚನ ಕೊಟ್ಟರೆ ನಾನು ನಿನ್ನನ್ನು ದರೆಪ್ಪನ ಉಪಟಳದಿಂದ ಪಾರುಮಾಡುತ್ತೇನೆ" ಎಂದು ಹೇಳುತ್ತಾನೆ. ಆಗ ಮಲ್ಲಯನು ಬೇಡಿದನ್ನು ಕೊಡುವುದಾಗಿ ವಚನಕೊಡುತ್ತಾನೆ. ಮುಂದೆ ರಾಹುತರಾಯನು ದರೆಪ್ಪನೊಡನೆ ಯುದ್ಧವನ್ನು ಸಾರುತ್ತಾನೆ. ಇವರಿಬ್ಬರ ನಡುವೆ ಘೋರ ಕದನ ನಡೆಯುತ್ತದೆ. ಈ ಯುದ್ಧದಲ್ಲಿ ದರೆಪ್ಪನ್ನು ಹೆದರಿ ಕುದುರೆಯನ್ನು ಹತ್ತಿ ಮುಚ್ಚಂಡಿಯ ಗುಡ್ಡವನ್ನು ಸೇರುತ್ತಾನೆ. ಈ ಸಮಯದಲ್ಲಿ ಆತನ ಕುದುರೆ ಗುಡ್ಡದ ಗವಿಯೊಳಗೆ ಹೋಗುತ್ತದೆ. ಆದರೆ ಕುದುರೆಯ ಮುಂದಿನ ಭಾಗ ಮಾತ್ರ ಗವಿಯೊಳಗೆ ಹೊಕ್ಕು ಹಿಂದಿನ ಭಾಗ ಹಾಗೆಯೇ ಗವಿಯಿಂದ ಹೊರಗೆ ಉಳಿಯುತ್ತದೆ. ಅದಕ್ಕಾಗಿಯೇ ಮುಚ್ಚಂಡಿ ಭಾಗದ ಜನರು ಇಂದಿಗೂ ಕುದುರೆಯ ಹಿಂದಿನ ಭಾಗಕ್ಕೆ ಪೂಜೆ ಮಾಡುತ್ತಾರೆ.[೧]

ದರೆಪ್ಪನನ್ನು ಯುದ್ಧದಲ್ಲಿ ಸೋಲಿಸಿ ಮಾದನ ಹಿಪ್ಪರಿಗಿಗೆ ಹಿಂದುರಿಗ ರಾಹುತರಾಯನ ಕರಾರಿನ ಪ್ರಕಾರ ಮಲ್ಲಯ್ಯನಿಗೆ ಆತನ ಹೆಂಡತಿ ಗಂಗೆಮಾಳಮ್ಮಳನ್ನು ಕೇಳುತ್ತಾನೆ. ಆದರೆ ಮಲ್ಲಯ್ಯ ಹೆಂಡತಿಯನ್ನು ಬಿಟ್ಟು ಬೇರೆ ಏನು ಬೇಕಾದ್ದು ಕೇಳು ಎಂದು ವಿನಂತಿಸಿಕೊಳ್ಳುತ್ತಾನೆ. ಆಗ ರಹುತರಾಯನು ಮಲ್ಲಯ್ಯನಿಗೆ ವಚನ ನೀಡಿದ್ದನ್ನು ಜ್ಞಾಪಿಸುತ್ತಾನೆ. ಇದರಿಂದ ಮಲ್ಲಯ್ಯನು ವಚನಭ್ರಷ್ಟನಾಗದೇ ತನ್ನ ಹೆಂಡತಿಯನ್ನು ಕೊಡಲು ಒಪ್ಪಿಕೊಳ್ಳುತ್ತಾನೆ. ಆಗ ಮಲ್ಲಯ್ಯನ ಹೆಂಡತಿ ರಾವುತರಾಯನ ಮುಂದೆ ಮದುವೆಯ ಕೆಲವು ಶರತ್ತು ಹಾಕುತ್ತಾಳೆ. ಏಳು ಕೋಟಿ ಜನ, ಏಳು ಕೋಟಿ ದೀವಟಿಗೆಯ ಸಂಭ್ರಮದ ಜೊತೆಗೆ ಸೂರ್ಯೋದಯಕ್ಕಿಂತ ಮುಂಚೆ ಅಕ್ಕಿಕಾಳು ಬೀಳಬೇಕೆಂದು ಹೇಳಿದಾಗ ಇದಕ್ಕೆ ಒಪ್ಪಿಕೊಂಡ ರಾಹುತರಾಯನು ಈ ಎಲ್ಲ ಸಿದ್ಧತೆಗಳನ್ನು ಮಾಡುವುದರೊಳಗೆ ಸೂರ್ಯೋದಯವಾಗುತ್ತದೆ. ಆಗ ರಾಹುತರಾಯನು ಸೋಲುತ್ತಾನೆ. ಹೀಗೆ ರಾಹುತರಾಯನ ಮದುವೆಯ ದಿನದ ಆಚರಣೆಗಾಗಿ ಇಂದಿಗೂ ಹಿಪ್ಪರಿಗಿಯಲ್ಲಿ ಜಾತ್ರೆ ಜರುಗುತ್ತದೆ.

ಜನಪದ ಸಾಹಿತ್ಯದಲ್ಲಿಯೂ ದರಿದೇವರ ಉಲ್ಲೇಖ ಕೆಲವು ತ್ರಿಪದಿಗಳಲ್ಲಿ ಕಂಡುಬರುತ್ತದೆ. ಹಲಸಂಗಿ ಗೆಳೆಯರು ಸಂಪಾದಿಸಿದ ಗರತಿಯ ಹಾಡು ತ್ರಿಪದಿಗಳ ಸಂಗ್ರಹದಲ್ಲಿಯ ಒಂದು ಪದ್ಯ ಹೀಗಿದೆ:

---

೧. ಡಾ. ಆರ್. ಆಯ್. ಚಪ್ಪರಬಂದ: ವಿಜಾಪುರ ಜಿಲ್ಲೆಯ ಜಾತ್ರೆಗಳು. ಪು.೧೨೪.

ಗುಡ್ಡದ ವಾರ್‍ಯಾಗ ಗುಲಗಂಜಿ ಬನದಾಗ

ಒಬ್ಬನ ಹ್ಯಾಂಗಿದ್ದಿ ಧರಿಧೂಳ! ನಿನ ಮುಂದ

ಅಬ್ಬರಿಸಿ ಗಂಗಿ ಹರದಾಳ

ಈ ಪದ್ಯದಲ್ಲಿ ದರಿದೂಳನಿಗೂ ದರಿದೇವನ ಜೀವನಕ್ಕೂ ಸಾಮ್ಯತೆಯನ್ನು ಕಾಣಬಹುದು. ಗುಡ್ಡದೊಳಗೆ ಒಬ್ಬನೇ ಕುಳಿತು ತಪಸ್ಸನ್ನು ಆಚರಿಸಿದ ದರಿದೇವನು ಅತ್ಯಂತ ಭಯಾನಕವಾದ ಗುಡ್ಡದೊಳಗೆ ಕುಳಿತದ್ದು ಜಾನಪದಕಾರನಿಗೆ ಸೋಜಿಗದ ವಿಷಯವಾಗಿದೆ. ಇಲ್ಲಿ ಜನಪದಕಾರ ದರಿದೇವರನ್ನು ಧರಿದೂಳ ಎಂದು ಕರೆದಿದ್ದಾನೆ. ಇಲ್ಲಿ ಬರುವ ಧರಿದೂಳನೇ ದರಿದೇವರು ಎಂದು ಗುರುತಿಸಬಹುದು. ದರಿದೇವನಿಗಿದ್ದ ಹಲವಾರು ನಾಮಗಳಿದ್ದವು. ದರಿದೇವ, ದರೆಪೊಪಾ ದರಗೋಬಾ, ದರೆಸೂರ, ದರಿಲಿಂಗ. ದರಿಮಾಳ ಹೀಗೆ ಭಿನ್ನ ಭಿನ್ನ ಜಾತಿ ಧರ್ಮದ ಭಕ್ತರು ಆತನನ್ನು ಬೇರೆ ಬೇರೆ ಹೆಸರುಗಳಿಂದ ಕರೆದಿದ್ದಾರೆ.

ದರಿದೇವರ ಗುಡ್ಡದ ವಾರೆಯಲ್ಲಿ ಹರಿಯುವ ಭೋರನದಿಯನ್ನು ಗಂಗೆ ಎಂದು ಜನಪದಕಾರ ಕರೆದಿದ್ದಾನೆ. ಸಾಮಾನ್ಯವಾಗಿ ಜನಪದರ ದೃಷ್ಠಿಯಲ್ಲಿ ನೀರು ಎಂದರೆ ಗಂಗಾಮಾತಾ ಎಂದೇ ಭಕ್ತಿಯಿಂದ ಸಂಬೋಧಿಸುತ್ತಾರೆ. ನದಿ, ಕೊಳ್ಳ, ಹಳ್ಳ, ಜರಿ ಇವೆಲ್ಲವೂ ಜನಪದರ ದೃಷ್ಟಿಯಲ್ಲಿ ಗಂಗೆಯಾಗಿಯೇ ಕಂಡುಬಂದಿವೆ.

**ಸ್ತುತಿ ಗೀತೆಗಳು :** ದರಿದೇವರನ್ನು ಕುರಿತು ಹಲವಾರು ಕವನಗಳು, ಸ್ತುತಿ ರೂಪದಲ್ಲಿ ರಚನೆಗೊಂಡಿವೆ. ಈ ಕವನಗಳು ಇತ್ತೀಚೆಗೆ ಸ್ಥಳೀಯ ಕವಿಗಳಿಂದ ರಚನೆಗೊಂಡಿದ್ದರೂ ಇವು ದರಿದೇವರ ಜೀವನ ಚರಿತ್ರೆಯನ್ನು ತಿಳಿಸಿಕೊಡುತ್ತವೆ. ದರಿದೇವರ ಸುಪ್ರಭಾತ, ಶ್ರೀ ದರಿದೇವರ ಅಷ್ಟೋತ್ತರ ಶತನಾಮಾವಳಿ, ದರಿದೇವರು ಮತ್ತು ಜಕ್ಕಮ್ಮಳ ಮೇಲೆ ಮಂಗಳಾರತಿ ಪದಗಳು, ಶ್ರೀ ದರಿದೇವರ ಕಾವ್ಯದರ್ಶನ, ಮುಂತಾದ ಕಾವ್ಯಗಳು ರಚನೆಗೊಂಡಿವೆ.

ಶ್ರೀ ದರಿದೇವರ ಕಾವ್ಯದರ್ಶನವು ದೀರ್ಘವಾದ ಪದ್ಯವಾಗಿದೆ. ಇಲ್ಲಿ ದರಿದೇವರ ಪೂರ್ಣಚರಿತ್ರೆಯೇ ಚಿತ್ರಣಗೊಂಡಿದೆ. ಪೌರಾಣಿಕ ಹಿನ್ನೆಲೆಯಲ್ಲಿ ಬರುವ ಕೈಲಾಸದ ಘಟನೆಯಿಂದ ಪ್ರಾರಂಭಗೊಳ್ಳುವ ಈ ಪದ್ಯವು ದರಿದೇವನ ಜನನ, ಬಾಲ್ಯ, ಶಿಕ್ಷಣ, ಯೌವ್ವನ, ಬೇಟೆ, ಯುದ್ಧ ಮುಂತಾದ ವಿಷಯಗಳು ಒಂದೊಂದಾಗಿ ಚಿತ್ರಣಗೊಂಡಿವೆ. ದರಿದೇವರ ಜೀವನ ಚರಿತ್ರೆಯನ್ನು ಸಂಪೂರ್ಣವಾಗಿ ಈ ಒಂದೇ ಪದ್ಯದಿಂದ ತಿಳಿದುಕೊಳ್ಳಬಹುದಾಗಿದೆ.

ಶ್ರೀ ದರಿದೇವರ ಅಷ್ಟೋತ್ತರ ಶತನಾಮಾವಳಿಯನ್ನು ಲಿಂಗಾಷ್ಟಕದ ಹಿನ್ನೆಲೆಯಲ್ಲಿ ರಚಿಸಲಾಗಿದೆ. ೧೦೮ ನಾಮಾವಳಿಗಳಿಂದ ಕೂಡಿದ ಇದರಲ್ಲಿ ದರಿದೇವರ ಸ್ತುತಿ ಮುಖ್ಯವಾಗಿ ಕಂಡುಬರುತ್ತದೆ. ಇನ್ನುಳಿದ ಪದ್ಯಗಳಾದ ಪಿ. ಗೋವಿಂದರಾಜುಲು ಅವರು ರಚಿಸಿದ ಧರೆಯ ಧರ್ಮದಾತ ಶ್ರೀ ದರಿದೇವರ, ಡಾ. ಶ್ರದ್ಧಾನಂದಸ್ವಾಮಿಗಳು ರಚಿಸಿದ ಬಯಲು ಬ್ರಹ್ಮ, ಶ್ರೀ ಶಿವತನಯ ಸುಧಾಕರ ರಚಿಸಿದ ಧರಿಜ್ಯೋತಿ ಮುಂತಾದ ಕಾವ್ಯಗಳು ದರಿದೇವರ ಮಹಿಮೆಯನ್ನು ಸಾರುವ ಸ್ತುತಿ ಗೀತೆಗಳಾಗಿವೆ.

ದರಿದೇವರ ಕಾವ್ಯಗಳಲ್ಲದೆ ಆತನ ಸಹೋದರಿ ಜಕ್ಕಮ್ಮ (ಜಯದೇವಿ) ದೇವಿಯನ್ನು ಕುರಿತೂ ಹಲವಾರು ಗೀತೆಗಳು ರಚನೆಗೊಂಡಿವೆ. ದರಿದೇವರಷ್ಟೇ ಮಹತ್ವ ಜಕ್ಕಮ್ಮಳಿಗೂ ಇದೆ. ಹೀಗಾಗಿ ಭಕ್ತರ ದೃಷ್ಟಿಯಲ್ಲಿ ಎರಡೂ ದೇವರುಗಳನ್ನು ಸಮನ ಭಕ್ತಿಭಾವದಿಂದ ಕೂಡಿವೆ.

ದರಿದೇವರ ಜಾತ್ರೆಯು ಪ್ರತಿವರ್ಷ ಸಾಗಿಕೊಂಡು ಬಂದಿದೆ(ಇದರ ವಿವರಣೆಯನ್ನು ಜಾತ್ರೆ ಮಹೋತ್ಸವಗಳು ಎಂಬ ಅಧ್ಯಾಯದಲ್ಲಿ ನಿರೂಪಿಸಲಾಗಿದೆ) ಈ ಜಾತ್ರೆಯ ವಿಶಿಷ್ಟ ಸೊಬಗನ್ನು ಕುರಿತು ಲೋಕನಾಥಸ್ವಾಮಿಗಳು ಒಂದು ಪದ್ಯದಲ್ಲಿ ನಿರೂಪಿಸಿದ್ದಾರೆ.

ಜಾತ್ರೆ ಆಗುತೈತಿ ಧರಿದೇವರ ಜಾತ್ರೆ ಆಗತೈತಿ।
ಜಾ ಜು, ಜೈ ಎಂಬ ಜೈಕಾರ ಹೊಡೆಯುತ ॥ಪ॥

ಪಲ್ಲಕಿ ನಂದಿಕೋಲ ಐತೆಮ್ಮ ಅದರ ಬಾರಬಾಳಮ್ಮ
ಲಡ್ಡು ಇರುವುದಮ್ಮ ಅದಕ ಎತ್ತಿ ಹೊಡೆಯುವರಮ್ಮ
ಹಚ್ಚಾ ಹುಚ್ಚಾ ಗುಣಗಳ ಬಿಟ್ಟು ಅಚ್ಚುಕಟ್ಟಾದ ಅರವಿತೊಟ್ಟು।
ಜಾತಿ, ಮತ ಪಂಥಗಳಳಿದು ಪಂತಿಸಾಗುದಮ್ಮಾ॥

ಜಾತ್ರಿಯೊಳಗೆ ಬಲು ರಾತ್ರಿರಿವುದಮ್ಮ
ಅವರಾತ್ರಿ ಕಳಿಯಲು ತೇರ ಬರುವದಮ್ಮ
ತಾಳ ಮೇಳಾ ನಗಾರಿ ಬಡಿದು ಜೈಕಾರ।
ಹೊಡೆಯುವ ಧರೀದೇವರ।
ಹೋಗುವಾಗ, ಬರುವಾಗ ಹೊಳ್ಳಿ ನೋಡುವ।
ಧರೀಶಾ ನೀ ಎನ್ನ ಭಕ್ತ ಬಡವ
ಮುರಗೇಂದ್ರ ಶಿವಯೋಗಿ ನಿನ್ನ ಜಾತ್ರೆಗೆ ಬರುವ।

ಇಲ್ಲಿ ಜಾತ್ರೆಯ ವಿಶೇಷತೆಯ ಜೊತೆಗೆ ಜಾತ್ರೆಯಲ್ಲಿರುವ ಕೆಲವು ಆಚರಣೆ, ನಂಬಿಕೆಗಳನ್ನು ಕುರಿತು ಉಲ್ಲೇಖಿಸಲಾಗಿದೆ.

ಶ್ರೀ ದರಿದೇವರನ್ನು ಕುರಿತು ರಚನೆಗೊಂಡ ಒಟ್ಟು ಕಾವ್ಯಗಳನ್ನು ಈ ಕೆಳಗಿನಂತಿವೆ.

೧. ಶ್ರೀ ದರಿದೇವರ ಕಾವ್ಯದರ್ಶನ

೨. ಬೆಳಗುವೆನಾರುತಿ ತಾಯೆ ಜಕ್ಕಮ್ಮದೇವಿಗೆ

೩. ದರಿದೇವರಿಗೆ ಯಡಿಯ ಮಾಡೋ

೪. ಮಂಗಳಂ ಮಂಗಳಂ ದರೀರಾಜನಿಗೆ

೫. ಮಂಗಲಂ ಜಯ ಜಕ್ಕಮ್ಮದೇವಿ

೬. ದರಿದೇವರ ಆರತಿ

೭. ಧರೆಯ ಧರ್ಮದಾತ ಶ್ರೀ ದರಿದೇವರ

೮. ಸುಪ್ರಭಾತ

೯. ದರಿದೇವ ಸುಪ್ರಭಾತ

೧೦. ಬಯಲ ಬ್ರಹ್ಮ

೧೧. ಶ್ರೀ ದರಿದೇವರ ಅಷ್ಟೋತ್ತರ ಶತನಾಮಾವಳಿ

೧೨. ಜಯತು ಜಯತು ಜಕ್ಕಮ್ಮ

೧೩. ದರಿಜ್ಯೋತಿ- ಈ ಎಲ್ಲ ಕಾವ್ಯಗಳನ್ನು ಅನುಬಂಧದಲ್ಲಿ ನೀಡಲಾಗಿದೆ.



## ಅಧ್ಯಾಯ: ಆರು

# ಜಾತ್ರೆ–ನಂಬಿಕೆ–ಆಚರಣೆಗಳು

ದರಿದೇವರು ಒಂದು ಜಾತಿ ಪಂಥಕ್ಕೆ ಸೇರಿದ ದೇವರಲ್ಲ. ಪೌರಾಣಿಕ, ಜಾನಪದ ಹಾಗೂ ಐತಿಹಾಸಿಕ ಈ ಮೂರು ನೆಲೆಗಳಲ್ಲಿ ದರಿದೇವನನ್ನು ಅಧ್ಯಯನ ಮಾಡಬಹುದಾಗಿದೆ. ಐತಿಹಾಸಿಕ ವ್ಯಕ್ತಿಯಾದ ದರಿದೇವರನ್ನು ಭಕ್ತಿಭಾವದಿಂದ ಪೌರಾಣಿಕ ವ್ಯಕ್ತಿಯನ್ನಾಗಿಸಿ, ಆ ಭಕ್ತಿಯ ಆಚರಣೆಯನ್ನು ಜಾನಪದದ ರೂಪದಲ್ಲಿ ಅಭಿವ್ಯಕ್ತಗೊಳಿಸಿಕೊಂಡದ್ದನ್ನು ಇಲ್ಲಿ ಕಾಣಬಹುದಾಗಿದೆ. ಇತಿಹಾಸಕ್ಕೂ ಪುರಾಣಕ್ಕೂ ಹೊಂದಾಣಿಕೆ ಆಗದಿದ್ದರೂ ದರಿದೇವರು ಒಂದು ವಿಶಿಷ್ಟ ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣವಾಗಿದೆ. ಇದಕ್ಕೆ ಕಾರಣ ಅಲ್ಲಿರುವ ಆಚರಣೆ ನಂಬಿಕೆ–ಸಂಪ್ರದಾಯಗಳು.

**ಜಾತ್ರೆಗಳ ಹಿನ್ನೆಲೆ :** ಜಾತ್ರೆಯು ಜನಪದ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗ. ಜಾತ್ರೆ ಒಂದು ಸಂಕೀರ್ಣ ಸಾಂಸ್ಕೃತಿಕ, ಸರ್ವಧರ್ಮ, ಸಮ್ಮಿಳಿತ ಮೂಲೋದ್ದೇಶದ ಆಧಾರದ ಮೇಲೆ ಜರಗುತ್ತದೆ. ಜಾತ್ರೆಗಳು ಸಾಮರಸ್ಯದ ಸಂಕೇತವೂ ಆಗಿರುವಂತೆ ಭಾವೈಕ್ಯತೆಯ ಪ್ರತೀಕವೂ ಆಗಿವೆ.

ದೇವರು ಧರ್ಮದ ವಾರ್ಷಿಕೋತ್ಸವವೇ ಜಾತ್ರೆ. ಜಾತ್ರೆಗಳು ಸಂಪೂರ್ಣ ಧಾರ್ಮಿಕ ಸ್ವರೂಪದಿಂದ ಕೂಡಿರುತ್ತವೆ. ಈ ಸಂದರ್ಭದಲ್ಲಿ ಆಯಾ ದೇವರ ಕುರಿತು ಇರುವ ಪುರಾಣ, ಕಥೆ, ಉಪನ್ಯಾಸಗಳು ನೀಡಿ ಜನರನ್ನು ದೇವರ ಬಗ್ಗೆ ಒಲುಮೆ ಬರುವಂತೆ ಮತ್ತು ನಿತ್ಯ ಜೀವನದಲ್ಲಿ ಧರ್ಮಮಾರ್ಗದ ತತ್ವದ ಮೇಲೆ ನಡೆಯುವಂತೆ ಜನಪದರಿಗೆ ಜಾತ್ರೆಗಳು ಪುಷ್ಟಿ ನೀಡುತ್ತವೆ.

ಜಾತ್ರೆಗಳನ್ನು ಸಾಮಾನ್ಯವಾಗಿ ಜನರಾಶಿಯೇ ಜಾತ್ರೆ ಎನ್ನಬಹುದು. ಜನ ಸೇರಿದರೆ ಜಾತ್ರೆ– ಊರಿಗೆ ಮಾತ್ರ ಸೀಮಿತವಾಗಿರುವ ಜಾತ್ರೆಗಳಲ್ಲಿ ಊರಿನ ಜನರು ಮತ್ತು ನೆಂಟರು ಭಾಗವಹಿಸುತ್ತಾರೆ.

ಆದರೆ ಕೆಲವು ಜಾತ್ರೆಗಳಿಗೆ ಸೀಮೆ ಇರುವುದಿಲ್ಲ, ಜಾತಿ, ಧರ್ಮದ ನಿರ್ಬಂಧವಿರುವುದಿಲ್ಲ. ಎಲ್ಲಾ ಜಾತಿ ಧರ್ಮ, ವರ್ಗ, ಪಂಗಡದ ಜನರು ಸೇರಿ ಜಾತ್ರೆಯನ್ನು ಆಚರಿಸುತ್ತಾರೆ. ಅಂತಹ ಜಾತ್ರೆಗಳಲ್ಲಿ ದರಿದೇವರ ಜಾತ್ರೆಯೂ ಒಂದಾಗಿದೆ.

ದರಿದೇವರ ಜಾತ್ರೆಯು ಯಾವಾಗ ಪ್ರಾರಂಭವಾಯಿತು ಎಂದು ನಿಖರವಾಗಿ ಹೇಳಲಾಗವುದಿಲ್ಲ. ಆದರೂ ಇದು ದೇವಾಲಯದ ನಿರ್ಮಾಣದ ನಂತರವೇ ಬೆಳೆದು ಬಂದಿದೆ. ದೇವಾಲಯ ನಿರ್ಮಾಣದ ನಂತರ ದರಿದೇವರಿಗೆ ಬರುವ ಭಕ್ತರ ಸಂಖ್ಯೆ ಹೆಚ್ಚಾಗುತ್ತದೆ. ಜನರ ಬೇಡಿಕೆ, ಬಯಕೆಗಳು ಈಡೇರಿದಾಗ ದೇವರ ಮೇಲಿನ ಶ್ರದ್ಧೆ ಹೆಚ್ಚಾಗುತ್ತದೆ. ಕಷ್ಟಗಳು ಹೆಚ್ಚಿಗೆ ಬಂದಾಗಲೂ ದೇವರನ್ನು ಮೊರೆ ಹೋಗುವುದು ಮನುಷ್ಯನ ಸ್ವಭಾವ.

ದರಿದೇವರ ಜಾತ್ರೆಯು ಪ್ರತಿವರ್ಷ ದವನದ ಹುಣ್ಣಿಮೆಯ ಸಂದರ್ಭದಲ್ಲಿ ಬರುವ ಮೂಲಾ ನಕ್ಷತ್ರದಂದು ನೆರವೇರುತ್ತದೆ. ಕರ್ನಾಟಕ, ಮಹಾರಾಷ್ಟ್ರ ರಾಜ್ಯಗಳ ಸಾವಿರಾರು ಜನ ಭಕ್ತರು ಈ ಜಾತ್ರೆಯಲ್ಲಿ ಸೇರುತ್ತಾರೆ. ಯಾವುದೇ ಜಾತಿ, ಧರ್ಮಕ್ಕೆ ಸೀಮಿತವಾಗದ ದರಿದೇವರ ಜಾತ್ರೆಗೆ ಎಲ್ಲಾ ಜಾತಿ, ಜನಾಂಗದವರು ಸೇರುವುದು ವಿಶೇಷವಾಗಿದೆ.

**ಆಚರಣೆಗಳು** : ದರಿದೇವರ ಜಾತ್ರೆಯ ಸಂದರ್ಭದಲ್ಲಿ ಕೆಲವು ವಿಶಿಷ್ಟವಾದ ಆಚರಣೆಗಳು ಬೆಳೆದು ಬಂದಿವೆ. ಜಾತ್ರೆಯ ಸಂದರ್ಭದಲ್ಲಿ ಕಂಡುಬರುವ ಈ ಆಚರಣೆ-ಸಂಪ್ರದಾಯಗಳಲ್ಲಿ ವಿಭಿನ್ನ ಸಂಸ್ಕೃತಿಯು ಕೂಡಿಕೊಂಡು ಸಾಮರಸ್ಯವನ್ನುಂಟುಮಾಡಿದೆ. ಇಲ್ಲಿಯ ಆಚರಣೆಗಳು ಮಹಾರಾಷ್ಟ್ರದ ಜೇಜೂರಿ ಖಂಡೋಬಾ ಕರ್ನಾಟಕದ ದೇವರಗುಡ್ಡ, ಮೈಲಾಪೂರ, ಬಾನಾಪುರ, ದೇವರ ಹಿಪ್ಪರಗಿ ಮುಂತಾದ ಕಡೆಗಳಲ್ಲಿ ಕಂಡುಬರುವ ಆಚರಣೆಗಳಿಗೆ ಸಾಮಿಪ್ಯವನ್ನು ಹೊಂದಿವೆ. ಹೀಗಾಗಿ ದರಿದೇವರ ಜಾತ್ರೆಯಲ್ಲಿ ಕರ್ನಾಟಕ-ಮಹಾರಾಷ್ಟ್ರದ ಸಾಂಸ್ಕೃತಿಕ ಸಾಮರಸ್ಯತೆಯನ್ನು ಕಾಣಬಹುದಾಗಿದೆ. ಗಡಿ ಪ್ರದೇಶದಲ್ಲಿ ಇದು ಅನಿವಾರ್ಯವೂ ಆಗಿದೆ.

ದರಿದೇವರ ಆಚರಣೆಗಳಲ್ಲಿ ಭೈರವ, ಶಿವ ಹಾಗೂ ಮೈಲಾರ ಇವರೆಡು ಸಂಪ್ರದಾಯಗಳು ಮಿಶ್ರಣಗೊಂಡು ಸಾಗುವುದು ಗಮನಾರ್ಹ ಸಂಗತಿಯಾಗಿದೆ. ಭೈರವ, ಶಿವ ಹಾಗೂ ಮೈಲಾರ ಇವೆರಡು ದೇವರುಗಳು ಪರಶಿವನ ಅವತಾರಗಳು. ಭೈರವನ ಅವತಾರದಲ್ಲಿ ನಂದಿ ವಾಹನವನ್ನು ಹೊಂದಿ ಭಸ್ಮಧಾರಿಯಾಗಿ ಕಂಡುಬಂದರೆ ಮೈಲಾರನ ಅವತಾರದಲ್ಲಿ ಅಶ್ವಾರೂಢನಾಗಿ ಭಂಡಾರ ಭೂಷಿತನಾಗಿ ಕಂಡುಬರುತ್ತಾನೆ. ಕನಮಡಿಯ ಸುತ್ತಮುತ್ತಲು ಶೈವ ಹಾಗೂ ಕುರುಬ ಜನಾಂಗದ ಜನರು ಹೆಚ್ಚಾಗಿ ಇರುವುದರಿಂದ ಎರಡೂ ಸಂಪ್ರದಾಯಗಳು ಬೆಳೆದು ಬರಲು ಕಾರಣವಾಗಿದೆ. ಮೈಲಾರ ಸಂಪ್ರದಾಯದ ಉಗಮವನ್ನು ಕುರಿತು ಬ್ರಹ್ಮಾಂಡ ಪುರಾಣದಲ್ಲಿ ಉಲ್ಲೇಖಿಸಲಾಗಿದೆ. ಇಲ್ಲಿ ಉಲ್ಲೇಖಗೊಂಡಿರುವಂತೆ

ಮಣಿಚೂಲ ಪರ್ವತದಲ್ಲಿ ಅನುಷ್ಠಾನಗೈಯುತ್ತಿದ್ದ ತಪಸ್ವಿಗಳ ತಪೋಭಂಗಕ್ಕೆ ಯತ್ನಿಸಿದ ಮಣಿ ಮಲ್ಲಾಸುರರೆಂಬ ಇಬ್ಬರು ರಾಕ್ಷಸರನ್ನು ಭೈರವ ಶಿವನು ಮಾರ್ತಾಂಡ ಮೈಲಾರನಾಗಿ ಅವತರಿಸಿ ಅವರನ್ನು ಸಂಹಾರಗೈದನು. ಹೀಗಾಗಿ ಭೈರವನ ಸಂಪ್ರದಾಯಕ್ಕಿಂತ ಮೈಲಾರನ ಸಂಪ್ರದಾಯವೇ ಹೆಚ್ಚು ಪ್ರಚಲಿತವಾಯಿತು.

**ಸಬನಿ ಸುತ್ತುವುದು** : ದರಿದೇವರ ಜಾತ್ರೆಯು ದವನದ ಹುಣ್ಣಿಮೆಯಾದ ಐದನೇ ದಿನ ನೆರವೇರಿವುದು. ದರಿದೇವರ ಪಲ್ಲಕ್ಕಿಯು ಕನಮಡಿ ಊರಿನಿಂದ ದರಿದೇವರ ದೇವಾಲಯಕ್ಕೆ ಬರುತ್ತದೆ. ಪಲ್ಲಕ್ಕಿಯನ್ನು ಜಕ್ಕಮ್ಮದೇವಿಯ ಗುಡಿಯ ಬಳಿಗೆ ತೆಗೆದುಕೊಂಡು ಹೋಗಿ ಅಲ್ಲಿ ಗುಡಿಯ ಐದು ಸುತ್ತು ಸುತ್ತಿಸುತ್ತಾರೆ. ಹೀಗೆ ಪಲ್ಲಕ್ಕಿಯನ್ನು ಜಕ್ಕವ್ವನ ಗುಡಿಗೆ ಸುತ್ತಿಸುವುದಕ್ಕೆ ಸಬನಿ ಎಂದು ಕರೆಯುತ್ತಾರೆ. ಇಲ್ಲಿಂದಲೇ ಜಾತ್ರೆಯ ಕಾರ್ಯಕ್ರಮಗಳು ಪ್ರಾರಂಭಗೊಳ್ಳುತ್ತವೆ. ಸಬನಿ ಸುತ್ತುವ ಸಂದರ್ಭದಲ್ಲಿ ನಂದಿ, ಕೋಲಾಟ, ಡೊಳ್ಳು ಬಾರಿಸುವುದು ಮುಂತಾದ ವಾದ್ಯ ಮೇಳದೊಂದಿಗೆ ನೆರವೇರುತ್ತದೆ.

**ಕುದುರೆ ಮೆರವಣಿಗೆ** : ದರಿದೇವರ ಜಾತ್ರೆಗೆ ಕುದುರೆ ಇರಲೇಬೇಕು. ದರಿದೇವರ ವಾಹನ ಕುದುರೆ ಹೀಗಾಗಿ ದರಿದೇವರ ಮೇಲಿನ ಭಕ್ತಿಯನ್ನು ಆತನ ವಾಹನದ ಮೇಲೆಯೂ ಇಟ್ಟಿರುತ್ತಾರೆ. ಜಾತ್ರೆಯ ದಿನದಂದು ಕುದುರೆಯನ್ನು ಅಲಂಕಾರಗೊಳಿಸಲಾಗುತ್ತದೆ. ದರಿದೇವರ ಹೆಸರಿನಲ್ಲಿ ಕುದುರೆಯನ್ನು ನಿರಂತರವಾಗಿ ಸಾಕಿಕೊಂಡು ಬರಲಾಗುತ್ತದೆ. ಪಂಚರಂಗಿ ಕುದುರೆಯನ್ನು ಲಕ್ಷಾಂತರ ರೂಪಾಯಿ ಕೊಟ್ಟು ತಂದಿರುತ್ತಾರೆ. ಈ ಕುದುರೆಯು ಮೊದಲು ದೇವಾಲಯದಲ್ಲಿಯೇ ಇರುತ್ತಿತ್ತು. ಈಗ ಹಲವು ವರ್ಷಗಳಿಂದ ಕನಮಡಿಯ ಗೌಡರ ಮನೆಯಲ್ಲಿ ಅದನ್ನು ಸಾಕಲಾಗುತ್ತದೆ. ಇದಕ್ಕೆ ದೇವರಕುದುರೆಯೆಂದೇ ಕರೆಯುತ್ತಾರೆ. ಈ ಕುದುರೆಯನ್ನು ಹಿಡಿದುಕೊಂಡು ಬರುವವರು ಮುಸ್ಲಿಂರಾಗಿದ್ದಾರೆ. ಇದು ಸಾಮರಸ್ಯದ ಸಂಕೇತ. ದರಿದೇವರ ಉಪಾಸಕರು ಎಲ್ಲಾ ಜಾತಿ ಧರ್ಮದವರಾಗಿದ್ದಾರೆ ಎನ್ನುವುದಕ್ಕೆ ಇದು ಸಾಕ್ಷಿಯಾಗಿದೆ.

**ಕುದುರೆಗಾರರು** : ದರಿದೇವರ ಜಾತ್ರೆಯ ಕಾಲದಲ್ಲಿ ದೀವಟಿಗೆ ಹಿಡಿಯುವುದು ಮತ್ತು ಎದುರು-ಬದುರಾಗಿ ನಿಂತು ಲಡ್ಡು ಕಟೆಯುವ ಭಕ್ತಾಧಿಗಳಿಗೆ ಕುದುರೆಗಾರರು ಎನ್ನುತ್ತಾರೆ. ಲಡ್ಡು ಕಟೆಯುವುದು ದರಿದೇವರ ಜಾತ್ರೆಯ ವಿಶೇಷವಾಗಿದೆ. ಲಡ್ಡು ಇದು ವೀರನ ಸಂಕೇತ. ದರಿದೇವನು ಕುದುರೆಯ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದುದರಿಂದ ಕುದುರೆಯನ್ನು ಹೊಡೆಯಲು ಬೇಕಾದ ಲಡ್ಡು ಇದು ವಿಶಿಷ್ಟ ಸಂಪ್ರದಾಯವಾಗಿ ಉಳಿದುಕೊಂಡು ಬಂದಿದೆ. ಮುಸ್ಲಿಂ ಧಾರ್ಮಿಕ ಆಚರಣೆಗಳಲ್ಲಿಯೂ ಲಡ್ಡಿನಿಂದ ಹೊಡೆಯುವುದು, ಹೊಡೆಸಿಕೊಳ್ಳುವುದು ಬೆಳೆದುಬಂದಿದೆ. ಆದರೆ ಅದಕ್ಕೂ ದರಿದೇವರಿಗೂ ಯಾವುದೇ ಸಂಬಂಧ ಕಂಡುಬರುವುದಿಲ್ಲ. ದರಿದೇವರ ಜಾತ್ರೆಯ ಸಂದರ್ಭದಲ್ಲಿ ಕಂಡುಬರುವ ಆಚರಣೆಗಳನ್ನು ಹೊರತುಪಡಿಸಿ ಇನ್ನುಳಿದ ದಿನಗಳಲ್ಲಿ ಬೇರೆ ಬೇರೆ ವಿಶೇಷ-ಸಂದರ್ಭಗಳಲ್ಲಿಯೂ ಹಲವಾರು ಆಚರಣೆಗಳು ಕಂಡುಬರುತ್ತವೆ.

**ದರಿದೇವರ ಪೂಜಾ ವಿಧಾನ :** ದರಿದೇವರ ಪೂಜೆಯನ್ನು ಪ್ರತಿನಿತ್ಯ ಎರಡು ಸಲ ನೆರವೇರಿಸಲಾಗುತ್ತದೆ. ವಿಶೇಷವಾದ ಸಂದರ್ಭಗಳಲ್ಲಿ ಹಾಗೂ ಭಕ್ತರ ಕೋರಿಕೆಯ ಮೇರೆಗೆ ರುದ್ರಾಭಿಷೇಕವನ್ನು ನಡೆಸಲಾಗುತ್ತದೆ. ಭಕ್ತರು ತಮ್ಮ ಬೇಡಿಕೆ, ಹರಿಕೆಗಳನ್ನು ತೀರಿಸಲು ವಿಶೇಷವಾದ ಪೂಜೆಗಳನ್ನು ನೆರವೇರಿಸುತ್ತಾರೆ. ಇಂತಹ ವಿಶೇಷವಾದ ಪೂಜೆಗಳಲ್ಲಿ ಎಲಿಪೂಜೆಯು ಹೆಚ್ಚು ಪ್ರಚಲಿತವಿದೆ. ದರಿದೇವರಿಗೆ ಎಲೆ ಹೂವಿನಿಂದ ಅಲಂಕಾರ ಮಾಡುವುದೇ ಎಲೆಪೂಜೆ. ನಿರಾಕಾರಿಯಾದ ದರಿದೇವನು ಕಾಡಿನಲ್ಲಿ ಇರುವುದರಿಂದ ಆತನಿಗೆ ಎಲೆಯನ್ನು ಸಂಕೇತವಾಗಿ ಬಳಸುತ್ತಿರಬಹುದಾಗಿದೆ. ದರಿದೇವರ ಪೂಜೆ ನೆರವೇರುವುದಕ್ಕಿಂತ ಪೂರ್ವದಲ್ಲಿ ಜಕ್ಕಮ್ಮದೇವಿಯ ಪೂಜೆ ನೆರವೇರುತ್ತದೆ. ಅವಳ ಪೂಜೆಯನ್ನು ಮುಗಿಸಿಕೊಂಡು ದರಿದೇವರ ಪೂಜೆಯು ನಡೆಯುತ್ತದೆ. ಅನಂತರ ಇನ್ನುಳಿದ ದೇವರುಗಳನ್ನು ಪೂಜೆಮಾಡಲಾಗುತ್ತದೆ. ಭಕ್ತರು ಸಹ ಮೊದಲು ಜಕ್ಕಮ್ಮಳಿಗೆ ಹಣ್ಣು-ಕಾಯಿ ಕರ್ಪೂರಗಳನ್ನು ಬೆಳಗಿ ಅನಂತರ ದರಿದೇವರಿಗೆ ದರ್ಶನ ನೀಡುತ್ತಾರೆ.

**ಕಾಯಿ ಒಡೆಯುವುದು :** ದರಿದೇವರ ದೇವಾಲಯದ ನಂಬಿಕೆಗಳಲ್ಲಿ ವಿಶಿಷ್ಟವಾದುದು ಕಾಯಿ ಒಡೆಯುವುದು. ದೇವಾಲಯದಲ್ಲಿ ಒಟ್ಟು ಒಂದನೂರಾ ಮೂವತ್ತೈದು ಮೆಟ್ಟಿಲುಗಳಿವೆ. ಇಲ್ಲಿ ಮೆಟ್ಟಿಲಿಗೊಂದರಂತೆ ಕಾಯಿಗಳನ್ನು ಒಡೆಯಲಾಗುತ್ತದೆ. ತಮ್ಮ ಬೇಡಿಕೆಗಳು ಈಡೇರುವಂತೆ ಬೇಡಿಕೊಂಡ ಭಕ್ತರು ಅದನ್ನು ನೆರವೇರಿಸಲು ಟೆಂಗಿನಕಾಯಿಗಳನ್ನು ಒಡೆಯುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಮೆಟ್ಟಿಲುಗಳ ಮೇಲೆ ಟೆಂಗಿನಕಾಯಿಗಳ ಒಡೆದ ಚೂರುಗಳ ಹಾಸಿಗೆಯೇ ನಿರ್ಮಾಣಗೊಂಡಿರುತ್ತದೆ. ಆಗ ಮೆಟ್ಟಿಲುಗಳನ್ನು ಹತ್ತುವುದೇ ಒಂದು ಸಾಹಸದ ಕೆಲಸವಾಗುತ್ತದೆ. ಸಾವಿರಾರು ತೆಂಗಿನಕಾಯಿಗಳು ರಾಶಿರಾಶಿಯಾಗಿ ಬಿದ್ದಿರುತ್ತವೆ. ಟೆಂಗಿನಕಾಯಿಗಳನ್ನು ತೋರಣವಾಗಿ ಕಟ್ಟುವುದೂ ಇಲ್ಲಿ ಒಂದು ನಂಬಿಕೆಯಾಗಿ ಬೆಳೆದು ಬಂದಿದೆ. ವಿಶೇಷವಾಗಿ ಮಕ್ಕಳಿಲ್ಲದವರು, ರೋಗಿಗಳು, ವ್ಯಾಪಾರಿಗಳು ಮುಂತಾದವರು ಟೆಂಗಿನಕಾಯಿಯ ತೋರಣವನ್ನು ಕಟ್ಟಿ ತಮ್ಮ ಕೆಲಸ ಕಾರ್ಯ ಕೈಗೂಡುವಂತೆ ಬೇಡಿಕೊಳ್ಳುತ್ತಾರೆ.

**ಪಾದಯಾತ್ರೆ :** ದರಿದೇವರ ಗುಡ್ಡಕ್ಕೆ ಸುತ್ತ ಮುತ್ತಲಿನ ಜನರು ಪಾದಯಾತ್ರೆಯನ್ನು ಕೈಗೊಳ್ಳುತ್ತಾರೆ. ನೂರಾರು ಮೈಲುಗಳವರೆಗೆ ನಡೆದುಕೊಂಡು ಬಂದು ತಮ್ಮ ಹರಕೆಯನ್ನು ತೀರಿಸುತ್ತಾರೆ. ಕರ್ನಾಟಕ ಮಹಾರಾಷ್ಟ್ರದ ಬೇರೆ ಬೇರೆ ಭಾಗಗಳಿಂದ ತಂಡತಂಡವಾಗಿ ಪಾದಯಾತ್ರೆಯ ಮೂಲಕ ದರಿದೇವರ ಗುಡ್ಡಕ್ಕೆ ಬಂದು ಒಂದೆರಡು ದಿನ ಇಲ್ಲಿಯೇ ಉಳಿದು ಮತ್ತೆ ಪಾದಯಾತ್ರೆಯ ಮೂಲಕವೇ ತಮ್ಮ ಊರುಗಳಿಗೆ ತೆರಳುತ್ತಾರೆ.

**ಕಾಣಿಕೆಗಳು :** ದರಿದೇವರಿಗೆ ಸಲ್ಲುವ ಕಾಣಿಕೆಗಳಲ್ಲಿ ಹೆಚ್ಚಾಗಿ ಹಣದ ರೂಪದಲ್ಲಿರುತ್ತದೆ. ಇನ್ನು ಕೆಲವು ಭಕ್ತರು ಬಂಗಾರ, ಬೆಳ್ಳಿಯ ಒಡವೆಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ಕೆಲವು ಶ್ರೀಮಂತ

ವರ್ಗದವರು ಕಟ್ಟಡಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಪೂಜಾರಿಗಳಿಗೆ, ದೇವಾಲಯದ ಸೇವಕರಿಗೆ ಬಟ್ಟೆ, ವಸ್ತ್ರಗಳನ್ನು ಕಾಣಿಕೆಯಾಗಿ ನೀಡುತ್ತಾರೆ.

ನವರಾತ್ರಿಯ ಸಂದರ್ಭದಲ್ಲಿ ದರೆಪ್ಪದೇವರ ಪಾಲಿಕೆಯು ಕನಮಡಿಯ ಊರಿನಿಂದ ದೇವಸ್ಥಾನಕ್ಕೆ ಬರುತ್ತದೆ. ಒಂಬತ್ತು ದಿನಗಳವರೆಗೆ ಇಲ್ಲಿಯೇ ಉಳಿದು ಸಿಮೋಲಂಘನದ ದಿವಸ ಬನ್ನಿ ಮುಡಿದು, ಮೊದಲು ತಂಗಿ ಜಕ್ಕಮ್ಮಳಿಗೆ ಬನ್ನಿಯನ್ನು ಅರ್ಪಿಸಿ, ದರಿದೇವನು ಕನಮಡಿಗೆ ಮರಳುತ್ತಾನೆ. ಇದಕ್ಕೆ ಸಿಲಂಗಡಿ ಎಂದು ಕರೆಯುತ್ತಾರೆ.

ದರಿದೇವನನ್ನು ಪೂಜೆ ಮಾಡುವವರು ಲಿಂಗಯತ ಉಪ್ಪಾರ ಜಾತಿಗೆ ಸೇರಿದವರಾಗಿದ್ದಾರೆ. ಒಟ್ಟು ನಾಲ್ಕು ಬಡ್ಡಿಯವರು ಈ ಪೂಜೆಯನ್ನು ಹಂಚಿಕೊಂಡು ನಿಯಮಾನುಸಾರವಾಗಿ ಪೂಜೆಯನ್ನು ನೆರವೇರಿಸುತ್ತಾರೆ.

ಇಂದಾಪುರ ನಾರಾಯಣ ಸಾಹುಕಾರನ ವಂಶಸ್ತರು ಇಂದು ಮಹಾರಾಷ್ಟ್ರದ ತಾಸಗಾಂವದಲ್ಲಿ ನೆಲೆಸಿರುತ್ತಾರೆ. ಜಾತ್ರಿಯ ಸಂದರ್ಭದಲ್ಲಿ ಪ್ರತಿವರ್ಷ ತಪ್ಪದೇ ಬಂದು ಐದು ದಿನಗಳವರೆಗೆ ಪೂಜೆಯನ್ನು ನೆರವೇರಿಸುತ್ತಾರೆ. ಈ ಸಂದರ್ಭದಲ್ಲಿ ಅರ್ಚಕರು ಪೂಜೆಯ ಹಕ್ಕನ್ನು ಅವರಿಗೆ ಬಿಟ್ಟುಕೊಡುತ್ತಾರೆ. ಇದು ಇಂದಿಗೂ ಮುಂದುವರಿದುಕೊಂಡು ಬಂದಿದೆ.

ಒಟ್ಟಿನಲ್ಲಿ ದರಿದೇವರ ಜಾತ್ರೆ, ಉತ್ಸವ, ಆಚರಣೆ ನಂಬಿಕೆಗಳು ಒಂದು ವಿಶಿಷ್ಟವಾದ ಸಂಸ್ಕೃತಿಯನ್ನು ನಿರ್ಮಿಸಿದೆ. ಧರ್ಮ, ಭಾಷೆ, ಜಾತಿಯ ಭೇದ-ಭಾವವಿಲ್ಲದೆ ಸಾಮರಸ್ಯದಿಂದ ಕೂಡಿದ ಸಮನ್ವಯ ಸಂಸ್ಕೃತಿಯನ್ನು ನಿರ್ಮಿಸಿದೆ.



ಅಧ್ಯಾಯ : ಏಳು

# ಸಮಾರೋಪ

ಈ ಪ್ರಬಂಧದಲ್ಲಿ ದರಿದೇವರನ್ನು ಕುರಿತು ಸಾಂಸ್ಕೃತಿಕವಾಗಿ ಅಧ್ಯಯನವನ್ನು ಕೈಕೊಳ್ಳಲಾಗಿದೆ. ಒಂದು ಪ್ರದೇಶದ ವಿಶಿಷ್ಟ ಸಂಸ್ಕೃತಿಗೆ ಕಾರಣವಾದ ದರಿದೇವರು ಸಾಮಾಜಿಕ-ಧಾರ್ಮಿಕ ಸಾಮರಸ್ಯವನ್ನು ಮೂಡಿಸುವಲ್ಲಿ ತನ್ನದೇ ವಿಶಿಷ್ಟತೆಯನ್ನು ಪಡೆದುಕೊಂಡಿದ್ದಾನೆ. ಕರ್ನಾಟಕ-ಮಹಾರಾಷ್ಟ್ರದ ರಾಜ್ಯಗಳ ಸುಮಾರು ಎರಡುನೂರು ಹಳ್ಳಿಗಳಲ್ಲಿ ಈ ದರಿದೇವರ ಭಕ್ತರು ನೆಲೆಸಿದ್ದಾರೆ. ಲಕ್ಷಾಂತರ ಜನರ ಆರಾಧ್ಯ ದೈವವಾಗಿ ಮನೆದೇವರಾಗಿ, ಇಷ್ಟದೇವರಾಗಿ ನೆಲೆಸಿದ್ದಾನೆ. ಲಿಂಗಾಯತ, ಕುರುಬ, ಮರಾಠಿ, ಮುಸ್ಲಿಂಧರ್ಮದವರು ಒಂದೇ ಭಾವದಿಂದ ಈ ದೇವರನ್ನು ಆರಾಧಿಸುವುದು ಇಲ್ಲಿಯ ವೈಶಿಷ್ಟ್ಯವಾಗಿದೆ.

ದರಿದೇವರು ಪೌರಾಣಿಕ ಹಿನ್ನೆಲೆಯನ್ನು ಹೊಂದಿದ್ದರೂ ದೇವಸ್ಥಾನದ ಪರಿಸರವು ಹಲವಾರು ಮಹತ್ವದ ಅಂಶಗಳನ್ನು ಒಳಗೊಂಡಿದೆ. ದರಿದೇವರ ಗುಡ್ಡವು ಒಂದು ಪ್ರಾಚೀನ ಧಾರ್ಮಿಕ ನೆಲೆಯಾಗಿತ್ತು ಎನ್ನುವುದು ಇಲ್ಲಿಯ ಅವಶೇಷಗಳನ್ನು ಗಮನಿಸಿದಾಗ ತಿಳಿದುಬರುತ್ತದೆ.

ಕರ್ನಾಟಕ-ಮಹಾರಾಷ್ಟ್ರ ರಾಜ್ಯಗಳ ಗಡಿ ಪ್ರದೇಶದಲ್ಲಿ ನೆಲೆಸಿರುವ ದರಿದೇವರು ಎರಡೂ ರಾಜ್ಯಗಳ ಗಡಿಸಮಸ್ಯೆಯ ಪರಿಣಾಮಕ್ಕೆ ಒಳಗಾಗಿದ್ದರೂ ಧಾರ್ಮಿಕ ಆಚರಣೆಯಲ್ಲಿ ಯಾವುದೇ ಸಮಸ್ಯೆ ಎದುರಾಗಿಲ್ಲ. ಮೊದಲು ಮುಚ್ಚಂಡಿಯ ದರಿದೇವರೆಂದು ಕರೆಯುತ್ತಿದ್ದು, ಮಹಾಜನ ವರದಿಯ ನಂತರ ಕರ್ನಾಟಕದ ಪ್ರದೇಶದೊಳಗೆ ಸೇರಿದ್ದರಿಂದ ಕನಮಡಿಯ ದರಿದೇವರಾಗಿ ಗುರುತಿಸಲ್ಪಡುತ್ತಿದೆ. ದರಿದೇವರ ಗುಡ್ಡವು ಪ್ರಾಚೀನ ಕಾಲದಿಂದಲೂ ಮಹತ್ವವನ್ನು ಪಡೆದಿದೆ. ಇಲ್ಲಿ ಕಾಳಾಮುಖ, ಪಾಶುಪತ ಶೈವಸಂಪ್ರದಾಯದ ಕುರುಹುಗಳು, ಆಚರಣೆಗಳು ಕಂಡುಬರುತ್ತವೆ. ಕನಮಡಿಯೂ ಐತಿಹಾಸಿಕ ಮಹತ್ವವನ್ನು

ಪಡೆದುಕೊಂಡಿದೆ. ಕಣಂಬಡ ಮುನ್ನೂರು ಎಂಬ ಪ್ರಾಂತದ ಮುಖ್ಯವಾದ ನೆಲೆಯೇ ಇಂದಿನ ಕನಮಡಿ ಎನ್ನುವುದು ಶಾಸನಗಳಿಂದ ತಿಳಿದುಬಂದಿದೆ.

ದರಿದೇವರ ದೇವಾಲಯದ ಆಚರಣೆಗಳು ವಿಶಿಷ್ಟವಾಗಿವೆ. ಭೈರವ ಶ್ರಾವದ ಆಚರಣೆಗಳಿಗೂ ಈ ದೇವಾಲಯದ ಆಚರಣೆಗಳಿಗೂ ನಿಕಟವಾದ ಸಂಬಂಧವನ್ನು ಕಾಣಬಹುದು. ಭೈರವ, ಶಿವ ಹಾಗೂ ಮೈಲಾರ ಇವೆರಡೂ ಸಂಪ್ರದಾಯುಗಳ ಸಮ್ಮಿಳಿತವನ್ನು ಇಲ್ಲಿ ಕಾಣಬಹುದಾಗಿದೆ. ಶಿವಸಂಪ್ರದಾಯದವರು ಭಸ್ಮವನ್ನು ಧರಿಸಿದರೆ ಮೈಲಾರ ಸಂಪ್ರದಾಯದವರು ಭಂಡಾರವನ್ನು ಧರಿಸುತ್ತಾರೆ. ಈಗಲೂ ಈ ಎರಡೂ ಸಂಪ್ರದಾಯದ ಜನರು ಈ ಪ್ರದೇಶದಲ್ಲಿ ಕಂಡುಬರುತ್ತಾರೆ.

ದರಿದೇವರ ಜೀವನ ಚರಿತ್ರೆಗೆ ಸಂಬಂಧಿಸಿದಂತೆ ನಡೆದ ಘಟನೆಗಳ ಹಿನ್ನೆಲೆಯಲ್ಲಿ ಆಚರಣೆಗಳು ಮುಂದುವರೆದುಕೊಂಡು ಬಂದಿವೆ. ದರಿದೇವರ ಚರಿತ್ರೆಯೊಳಗೆ ಬರುವ ಹಿಪ್ಪರಿಗೆಯ ರಾಹುತರಾಯ, ಗಂಗೆಮಾಳಮ್ಮಳಿಗೆ ಸಂಬಂಧಿಸಿದ ಆಚರಣೆಗಳೂ ಹಿಪ್ಪರಿಗೆಯಲ್ಲಿಯೂ ಆಚರಿಸಲ್ಪಡುತ್ತವೆ. ಎರಡೂ ಆಚರಣೆಗಳನ್ನು ಗಮನಿಸಿದಾಗ ಎರಡರಲ್ಲಿಯೂ ಏಕಾಭಿಪ್ರಾಯ ಕಂಡುಬರುತ್ತದೆ.

ದರಿದೇವನನ್ನು ಯುದ್ಧದಲ್ಲಿ ಸೋಲಿಸಿದರೆ ನಿನಗೆ ಬೇಕಾದನ್ನು ಕೊಡುವುದಾಗಿ ಹೇಳಿದ ಹಿಪ್ಪರಿಗೆಯ ರಾಜನು ಈ ಕಾರ್ಯವನ್ನು ರಾಹುತರಾಯ ಈಡೇರಿಸಿ ರಾಜನ ಹೆಂಡತಿಯಾದ ಗಂಗಮಾಳಮ್ಮಳನ್ನೇ ಕೇಳುತ್ತಾನೆ. ಆದರೆ ಅದನ್ನು ಪೂರೈಸಲು ರಾಹುತನಿಂದ ಸಾಧ್ಯವಾಗದಿದ್ದಾಗ ಅವರ ಮದುವೆ ಮುರಿದು ಬೀಳುತ್ತದೆ. ಈ ಹಿನ್ನೆಲೆಯಲ್ಲಿಯೇ ಹಿಪ್ಪರಿಗೆಯಲ್ಲಿ ಇಂದಿಗೂ ಕೂಡ ರಾವುತರಾಯ ಗಂಗೆಮಾಳಮ್ಮರ ಮದುವೆಯನ್ನು ಜಾತ್ರೆಯ ಸ್ವರೂಪದಲ್ಲಿ ಆಚರಿಸುತ್ತಾರೆ. ದರಿದೇವರ ದೇವಾಲಯದ ಪರಿಸರವು ಹಲವಾರು ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ. ಈ ನೆಲೆಯು ನಾಥಪಂಥಧ ನೆಲೆ ಎನ್ನುವ ಸಂಶಯ ಬರುತ್ತದೆ. ನಾಥರು ಯೋಗಕ್ಕೆ ಪ್ರಾಧಾನ್ಯತೆಯನ್ನು ನೀಡಿದ್ದರು. ಯೋಗದಲ್ಲಿ ನಿಷ್ಣಾತರಾದ ಇವರು ಜಕ್ಕನಿಯನ್ನು ಪೂಜೆ ಮಾಡುತ್ತಾರೆ. ಎಲ್ಲೆಲ್ಲಿ ನಾಥಪಂಥಿಯ ನೆಲೆಗಳು ಇವೆಯೋ ಅಲ್ಲೆಲ್ಲ ಸ್ತ್ರೀ ಪೂಜೆ ನಡೆಯುತ್ತಿರುವುದುರ ಕುರುಹುಗಳು ಕಂಡು ಬರುತ್ತವೆ. ಈ ನೆಲೆಗಳೆಲ್ಲವೂ ಹೆಚ್ಚಾಗಿ ಹಳ್ಳ, ದರೆ(ಗುಡ್ಡ)ಯ ಹತ್ತಿರವೇ ಇರುವುದು ಕಂಡುಬರುತ್ತದೆ.

ದರಿದೇವರ ಗುಡ್ಡದಲ್ಲಿರುವ ಜಕ್ಕಮ್ಮದೇವಿಯು ಜಲದೇವತೆಯಾಗಿರಬಹುದಾಗಿದೆ. ಪ್ರಾಚೀನ ಕಾಲದಲ್ಲಿ ಜಲಮೂಲದೇವತೆಯನ್ನು ಪೂಜೆ ಮಾಡುವುದು ಕಂಡುಬರುತ್ತದೆ. ಈಗಲೂ ಈ ಪ್ರದೇಶವೂ ನೀರಿನ ಕೊರತೆಯನ್ನು ಎದುರಿಸುತ್ತಿದೆ. ಎಲ್ಲಿಯೂ ಇಲ್ಲದ ನೀರು ಇಲ್ಲಿಯ ಹಳ್ಳದಲ್ಲಿ ಇರುವುದನ್ನು ಕಂಡ ಮಾನವ ಅದನ್ನು ದೇವತೆಯ ಸ್ವರೂಪದಲ್ಲಿ ಪೂಜಿಸಿರುವ ಸಾಧ್ಯತೆಗಳಿವೆ. ಅದಕ್ಕಾಗಿಯೇ ಹಳ್ಳದ ಜಕ್ಕವ್ವ ಗುಡ್ಡದ ದರೆಪ್ಪ ಎನ್ನುವ ಹೆಸರು ರೂಢಿಯಲ್ಲಿ ಬಂದಿರಬಹುದಾಗಿದೆ.

ದರಿದೇವರಿಗೆ ಹಿನ್ನೆಲೆಯಾಗಿ ಮುಚ್ಚಂಡಿ ಗ್ರಾಮವನ್ನು ಅವಲೋಕಿಸಿದಾಗ ಈ ಗ್ರಾಮವು ಇಂದು ಮಹಾರಾಷ್ಟ್ರದ ಗಡಿಯಲ್ಲಿರುವ ಕನ್ನಡದ ಗ್ರಾಮವಾಗಿದೆ. ನೂರಕ್ಕೆ ೯೦ರಷ್ಟು ಜನರು ಕನ್ನಡಿಗರೇ ಆಗಿದ್ದಾರೆ. ಊರಿನ ಹೊರವಲಯದಲ್ಲಿರುವ ಬ್ರಹ್ಮದೇವರ ದೇವಾಲಯದ ಆವರಣದಲ್ಲಿ ಪ್ರಾಚೀನ ಕಾಲದ ಬೃಹತ್ ಶಿಲಾ ಗಣಪತಿಯ ಮೂರ್ತಿಯನ್ನು ಕಾಣಬಹುದು. ಅಖಂಡವಾದ ಏಕಶಿಲೆಯಲ್ಲಿ ನಿರ್ಮಾಣಗೊಂಡ ಈ ಗಣಪತಿಯ ಮೂರ್ತಿಯು ಅತ್ಯಾಕರ್ಷಕವಾಗಿದೆ. ಶಿಲೆಯೊಳಗೆ ಕೆತ್ತಲ್ಪಟ್ಟ ದೊಡ್ಡ ಗಾತ್ರದ ಇಂತಹ ಗಣಪತಿ ವಿಗ್ರಹಗಳು ವಿರಳವೆಂದೇ ಹೇಳಬಹುದು. ಬ್ರಹ್ಮದೇವರ ದೇವಾಲಯದ ಹತ್ತಿರವೇ ಶಂಕರಲಿಂಗದೇವಾಲಯವಿದೆ. ಇದೂ ಕೂಡ ಪ್ರಾಚೀನ ಅವಶೇಷಗಳನ್ನು ಒಳಗೊಂಡಿದೆ. ದೇವಾಲಯದ ಕಳಸದ ಮಧ್ಯದಲ್ಲಿ ಭೃಂಗಿಯ ಶಿಲಾಮೂರ್ತಿಯು ಮಹತ್ವದ್ದಾಗಿದೆ. ಮೂರು ಕಾಲುಗಳನ್ನು ಊರಿ ನಿಂತಿರುವ ಬಂಗಿಯಲ್ಲಿರುವ ಈ ಬೃಂಗಿಯ ಮೂರ್ತಿಯು ಅಪರೂಪದ ಶಿಲಾಮೂರ್ತಿಯಾಗಿದೆ. ಈ ಎಲ್ಲ ಪ್ರಾಚೀನ ಅವಶೇಷಗಳನ್ನು ಗಮನಿಸಿದಾಗ ಈ ನೆಲೆಯು ಪ್ರಮುಖ ಧಾರ್ಮಿಕ ಕೇಂದ್ರವಾಗಿರಬಹುದೆಂದು ಊಹಿಸಬಹುದಾಗಿದೆ. ಮುಚ್ಚಂಡಿಗೂ ದರಿದೇವರ ಗುಡ್ಡಕ್ಕೂ ಐದಾರು ಮೈಲುಗಳ ಅಂತರವಿದೆ. ಹೀಗಾಗಿ ಒಟ್ಟು ಈ ಪ್ರದೇಶವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿತ್ತೆಂಬುದು ತಿಳಿದುಬರುತ್ತದೆ.

ದರಿದೇವರು ವೀರಪರಂಪರೆಯನ್ನು ಹೊಂದಿದ ದೇವಾಲಯವಾಗಿದೆ. ದರೆಪ್ಪ ಒಬ್ಬ ವೀರನಾಗಿದ್ದರಿಂದ ಕುದುರೆ, ಅದನ್ನು ಹೊಡೆಯಲು ಉಪಯೋಗಿಸುವ ಲಡ್ಡು ಇವೆಲ್ಲವೂ ಯುದ್ಧಪರಂಪರೆಯನ್ನು ಹೊಂದಿದ್ದರ ಸ್ಪಷ್ಟವಾದ ಲಕ್ಷಣಗಳಾಗಿವೆ.

ಸಾಧ್ಯತೆಗಳು : ಇನ್ನು ಈ ಕ್ಷೇತ್ರದಲ್ಲಿ ಕೈಕೊಳ್ಳಬೇಕಾದ ಶೋಧಗಳೆಂದರೆ ದರಿದೇವರನ್ನು ಕುರಿತು ರಚನೆಗೊಂಡಿರುವ ಜಾನಪದ ಸಾಹಿತ್ಯವನ್ನು ಸಂಗ್ರಹಿಸುವ ಕಾರ್ಯ ನಡೆಯಬೇಕಾಗಿದೆ. ಕನ್ನಡ-ಮರಾಠಿ ಎರಡೂ ಭಾಷೆಯಲ್ಲಿ ಹಲವಾರು ಜಾನಪದ ಗೀತೆಗಳಲ್ಲಿ ದರಿದೇವರನ್ನು ಕುರಿತು ಸ್ತುತಿಸಲಾಗಿದೆ.

ಮುಚ್ಚಂಡಿ ಮತ್ತು ಕನಮಡಿಯ ಗ್ರಾಮಗಳ ಪ್ರಾಚೀನ ಅಧ್ಯಯನವು ನಡೆದರೆ ದರಿದೇವರ ಬಗೆಗೆ ಹೆಚ್ಚಿನ ಮಾಹಿತಿಗಳು ಸಿಗುವ ಸಾಧ್ಯತೆಗಳಿವೆ. ದರಿದೇವರ ಗುಡ್ಡದ ಸಮಗ್ರ ಅಧ್ಯಯನವನ್ನು ಕೈಕೊಳ್ಳುವುದರಿಂದ ಈ ಗುಡ್ಡದ ವಿಶಿಷ್ಟತೆಗಳು ತಿಳಿದು ಬರುತ್ತವೆ. ಇದರ ಬಗೆಗೆ ಆಳವಾದ ಅಧ್ಯಯನವನ್ನು ಕೈಕೊಳ್ಳಬೇಕಾಗಿರುವುದು ಅವಶ್ಯವಾಗಿದೆ.

ಈ ಎಲ್ಲಾ ಅಧ್ಯಯನಗಳು ಸಮರ್ಪಕವಾಗಿ ನಡೆದರೆ ದರಿದೇವರ ಸಂಪೂರ್ಣ ಚರಿತ್ರೆ ಪೂರ್ಣಗೊಳ್ಳಲು ಸಾಧ್ಯವಿದೆ.



# ಅನುಬಂಧ

೧. ದರಿದೇವರ ಕುರಿತಾದ ಕಾವ್ಯಸಾಹಿತ್ಯ

೨. ಸಂದರ್ಶನದಲ್ಲಿ ಮಾಹಿತಿ ನೀಡಿದ ಮಹನಿಯರು

೩. ಛಾಯಾಚಿತ್ರಗಳು

# ದರಿದೇವರ ಕುರಿತಾದ ಕಾವ್ಯಸಾಹಿತ್ಯ

## ಶ್ರೀ ದರಿದೇವರ ಕಾವ್ಯದರ್ಶನ

ಜಗನ್ಮಾತೆಜಗತ್ ಪಿತೃರು।
ಪೂಜೆಗೆ ಪಾತ್ರರು ಘನವಂತರವರು।
ಋಷಿವೃಂದವು ಒಟ್ಟಾಯಿತು ಅಲ್ಲಿ।
ಪೂಜೆ ಸಿದ್ಧಿಗಳ ಪಡೆವುದಕೆ ॥೧॥

ಕಾಲಭೈರವನು ಆ ಸಮಯಕ್ಕೆ ।
ಬಂದನು ಶೀಘ್ರದೀಪರ್ವತಕೆ।
ವಿಚಲಿತನಾಗಿ ಹೋಯಿತು ಲಕ್ಷ।
ಬಿಲ್ವವು ಸಿಕ್ಕಿತು ಪದತಲಕೆ ॥೨॥
ಸಿಟ್ಟಾಗಿ ಜಮದಗ್ನಿ ಈತನ ಕಂಡ।
ಸಿಟ್ಟಾಗಿ ಭೈರವಂಗೆ ಶಾಪನು ಬಿಟ್ಟ।
ಎಲೆ ಭೈರವನೀ ಮೂಢಮತಿ।
ಶಿವಸೇವೆಗೆ ನೀನು ಬಂದಿರುವೆ ॥೩॥

ನಷ್ಟವಾಯಿತೋ ನಿನ್ನ ವಿವೇಕ।
ದಕ್ಕದುನಿನಗೆ ಶಿವಲೋಕ।
ಮೃತ್ಯುಲೋಕದ ಸಾಗುವದುಚಿತ।
ಮನುಷ್ಯಜನ್ಮವ ತೋಡು ನೀನು ॥೪॥

ಕೇಳಿದ ನಷ್ಟದಿ ಭೈರವ ಶಾಪ।
ಭೈರವಗಾಯಿತು ಬಲುತಾಪ।
ಮ್ಲಾನ ಮುಖದಲ್ಲಿ ಭೈರವ ಕೇಳಿದ।
ಮುನಿವರ ಕೊಡಿರಿ ನನಗುಪಶಾಪ ॥೫॥

ಕೋರಿಕೆ ಕೇಳಿ ಶಂಕರ ಹೇಳಿದ।
ಭೈರವ ನಿನಗೆ ಶಾಪವು ಒಳಿತು।
ಮಾಡುತೆ ಧೈರ್ಯವ ಬಿಡಬೇಡ।
ಕಲಿಯುಗದಲ್ಲಿ ನೀನೆ ಶಾಶ್ವತ ॥೬॥

ದೇವರ ದೇವನ ನೆನಪೆನಗಿರಲಿ।
ದರಿದೇವರ ಕೃಪೆ ಜನ್ಮಾಂತರ ವಿರಲಿ।
"ತುಪ್ಪಹಟ್ಟಿ" ನಾಮದ ನಗರದಲಿ।
ಸಾತ್ವಿಕ ರಾಜನು ಅರಸರಲ್ಲಿ ॥೭॥

ರಾಜನ ಧಾರ್ಮಿಕ ರಾಣಿ ಸುಶೀಲೆ।
ನಿತ್ಯದಿ ದೇವನ ಸ್ತುತಿಸುವಳು।
ಮಕ್ಕಳೆ ಇಲ್ಲದ ಚಿಂತೆಯ ರಾಣಿಗೆ।
ಸದ್ಗತಿ ಇಲ್ಲೆಂದು ಕೊರಗುವಳು ॥೮॥

ಸದ್ಗುರು ಬ್ರಹ್ಮಾನಂದರ ಹರಕೆ।
ಇವರಿಗೆ ಕೊಟ್ಟವು ಸುಖ ಸಂತಸವ।
ಬ್ರಹ್ಮಗುರುಕಂಡಿವರ ಕೊರಗನು।
ಕೊರಗು ಕಳೆಯಲವ ನುಡಿದಾನೊ ॥೯॥

ಸಪ್ತರ್ಷಿಗಳು ಹೇಳಿದರಂದು।
ವರದ ಶಂಕರ ಪೂಜೆಯ ಮಾಡಿ।
ಸೋಮವಾರಗಳು ಹದಿನಾರು ಬಿಡದೆ।
ಭಕ್ತಿಯ ಮಾಡಿರಿ ಇಬ್ಬರು ಕೂಡಿ ॥೧೦॥

ಎಂದು ನುಡಿದು ಬ್ರಹ್ಮಾನಂದರು।
ರಾಣಿ ಉಡಿಯಲಿಬ್ಬರು ಶ್ರೀಫಲ।
ಸುಶೀಲರಾಣಿಗೆ ಆಶೀರ್ವಚನ।
ಪುತ್ರವತಿ ಆಗೆಂದು ನುಡಿದರು ॥೧೧॥

ಹದಿಮೂರುನೆಯ ಶತಕದ ಕಾಲಿತ್ತು।
ಯವನರಾಜರು ಆಳುತಲಿದ್ದರು।
ಸುಖಮಯ ಜೀವನ ಇರಲಿಲ್ಲಾಗ।
ತೊಂದರೆ ರಾಜ್ಯಕ್ಕೆ ಕೊಡುತಲೆ ಇದ್ದರು ॥೧೨॥



ಸಾತ್ವಿಕ ರಾಜನು ಆಳುತಲಿದ್ದ।
ಕಷ್ಟದಿ ಪ್ರಜೆಗಳ ಪಾಲಿಸುತ್ತಿದ್ದ।
ಸಾತ್ವಿಕರಾಜನೆ ಪ್ರಜೆಗಳ ಪಿತನು।
ಸುಶೀಲ ರಾಣಿಯು ಪ್ರೇಮದ ಮಾತೆ ॥೧೩॥

ಇಬ್ಬರು ಫಲವನು ಪಡೆದವರು।
ಸುಕುಮಾರನಿಗೆ ಜನ್ಮವ ನೀಡಿದರು।
ಮುಖದಲಿ ಕಾಂತಿ ಹೊಳೆಯುತ್ತಲಿರಲು।
ನಲಿವರು ಈಶ್ವರ ಹೆಸರನು ಇತ್ತು ॥೧೪॥

ಭಾರದ್ವಾಜ ಬ್ರಹ್ಮಾನಂದರು ಕೂಡಿದರು।
ಶಂಕರ ಲಿಂಗರ ಹರಸಿದರು।
ದೈವವು ಕರುಣೆಯ ತೋರುತಲಿರಲು।
ಕೃಪೆಯಿಂ ಜಯದೇವಿ ಜನಿಸಿದಳು ॥೧೫॥

ಸಕ್ಕರಿ ಹೇರಿ ಆನೆಯ ಮೇಲೆ।
ಮುದದಿ ಸಕ್ಕರೆ ಹಂಚಿದರಾಗ।
ಕಳೆದವು ಐದು ವರ್ಷಗಳು।
ಶಿಕ್ಷಣಕಾರಂಭ ಈಶ್ವರಂಗೆ ॥೧೬॥

ಮೊಳಗುತಲಿತ್ತು ಶಿವ ಜಯಕಾರ।
ಈತೇರ ನಿತ್ಯ ನಡೆಯುತಲಿತ್ತು।
ತಿಂಗಳು ವರ್ಷಗಳು ಉರುಳುತಲಿರಲು।
ರಾಜರ ಆರೋಗ್ಯ ಕೆಡುತಲೆ ಇತ್ತು ॥೧೭॥

ರೋಗವು ಬಿಡದೆ ಬೆನ್ನಟ್ಟಿರಲು।
ದೊರೆ ಸೇರಿದರು ಈಶ್ವರ ಪಾದಕೆ।
ಪತಿಯವಿಯೋಗದಿ ರಾಣಿ ಸುಶೀಲಾ।
ದೈವಾಧೀನಳು ಬಿಟ್ಟಳು ಲೋಕ ॥೧೮॥

ದಶಕಗಳು ಕಳೆದರೂ ಈಶ್ವರ।
ಹದಿನಾರು ತುಂಬಿದ ಜಯಾಸೋದರಿ।
ಕಳಚಿದ ಪಕ್ಕದ ಪಕ್ಷಿಗಳಂತೆ।
ಅಣ್ಣ–ತಂಗಿಯವರು ಶೋಕಿಸುತ್ತಿದ್ದರು ॥೧೯॥

ತಂದೆ ತಾಯಿಗಳ ನಿರಂತರ ನೆನಪು।
ಉಳಿಯಲು ಮಂದಿರ ಕಟ್ಟಲು ಅವರು।
ಪೂಜೆ ಆರತಿ, ನಡೆಯಲು ಅವರಿಗೆ।
ಪೂರ್ಣ ಸಿದ್ಧತೆಯ ಮಾಡಿದರು ॥೨೦॥

ಉಮಾ ಮಹೇಶ್ವರ ಮಂದಿರವನ್ನು।
ಬಲು ಸುಂದರವಾಗಿ ಕಟ್ಟಿದರಲ್ಲಿ।
ಪೂಜೆ ಆರತಿ, ಅನ್ನಸತ್ರಗಳು।
ನಡೆದವು ನಿತ್ಯದಿ ಭಕ್ತಿಯಲಿ ॥೨೧॥

ಮಂತ್ರಿಗೆ ರಾಜ್ಯವ ವಹಿಸಲು ಹೇಳಿ।
ಗುರುಗಳ ಬೀಡಿಗೆ ಈಶ್ವರ ನಡೆದರು।
ಜಯದೇವಿಗೆ ತಂಗಿ ಜಕ್ಕವ್ವ ಬಂದಳು।
ಗುರುವಿನ ಮಠದಲ್ಲಿ ಉಳಿದಿಹರು ॥೨೨॥

ಹರಿದಾರಿ ಅಂತರ ಶ್ರಮಿಸಿ ಬಂದರು।
ತರುಣರು ಶಿಕ್ಷಣ ಬೇಡಿದರು।
ಖಡ್ಗ, ಭಲ್ಲೆಗಳ, ಬಿಲ್ಲು ಬಾಣಗಳ।
ಶಿಕ್ಷಣ ಗುರುಗಳು ನೀಡಿದರು ॥೨೩॥

ಹೋಗಿರಿ ಬನಕೆ ಬೇಟೆಯನಾಡಿ।
ಹೊಡೆದಟ್ಟಿರಿ ಹಿಂಸೆಯ ಪ್ರಾಣಿಗಳ।
ಆಗಲಿ ನಿಮ್ಮದು ಬಹು ಸಂಘಟನೆ।
ಕಳೆದ ಹೋಗಲಿ ಜನ ಸಂಕಟವು ॥೨೪॥

ಜೀವಿಸಿರೆಲ್ಲರು ಸುಖದಲ್ಲೆಂದು।
ಗುರುಗಳ ಹರಕೆಯ ನಿತ್ತರು ಗುಂಪಿಗೆ।
ದೇವರ ಹಿಪ್ಪರಗಿ ಎಂಬುದು ನಗರ।
ಪೂರ್ವದ ದೆಶೆಯಲಿ ಶೋಭಿಸುತಿತ್ತು।
ಸುಖದಾ ನಗರಕ್ಕೆ ಮಲ್ಲೇಶ ದೊರೆಯು।
"ಗಂಗಾಮಾಲೆ" ರಾಣಿಗೆ ಹೆಸರಿತ್ತು ॥೨೫॥

ಮಲ್ಲೇಶ ಹೊರಟರು ಒಂದು ದಿನ।
ಬೇಟೆಗೆ ಮಂತ್ರಿಯ ಜೊತೆಗಿದ್ದ।
ನಿಬಿಡಾರಣ್ಯದ ಒಳಗೆ।
ಬೇಟೆಯ ನಾತನು ಶೋಧಿಸುತ್ತಿದ್ದ ॥೨೬॥

ವಿಶಾಲವೃಕ್ಷ ಕೆಳಗಡಿಯಲಿ।
ಉಗ್ರವ್ಯಾಘ್ರ ಹೊಂಚು ಹಾಕಿತ್ತು।
ಸೇವಕರಂಜಿ ಹೋದರು ಓಡಿ।
ಸಿಕ್ಕ ದಾರಿಯ ಹೌ ಹಾರುತ್ತ ॥೨೭॥

ದೈವಯೋಗವೆಂದೇ ಬಂದನು ಓಡಿ।
ಈಶ್ವರ ಬೇಟೆಯನಾಡುತ್ತ।
ಕೂಗಾಟ ಚಿರಾಟ ಕೇಳಿದಾಗ।
ರಕ್ಷಣೆಗೆ ಬಂದನು ಓಡುತ್ತ ॥೨೮॥

ಮಲ್ಲೇಶ ಹತಾಶನಾದುದು ಕಂಡು।
ಕುದುರೆಯನಿಳಿದು ಅಲ್ಲೇ ನಿಂತನು।
ಭಾಲೆಯ ಬಿರುಸಿರಿ ಎಸೆದು ಬಿಟ್ಟನು।
ಹುಲಿಯ ಪ್ರಾಣವ ತೆಗೆದುಬಿಟ್ಟನು ॥೨೯॥

ಗಾಯದಿ ಮರಳುವ ಮಲ್ಲನ ತಂದನು।
ಮುಚ್ಚಂಡಿ ಮಠದೆಡೆ ಬಂದಿಹುರು।
ರಾಜವೈದ್ಯನಿಗೆ ಪ್ರಾರ್ಥಿಸಿ ಕರೆದು।
ಮಲ್ಲಂಗೆ ಉಪಚಾರ ಮಾಡಿದರು ॥೩೦॥

ಮರಳಿದ ಮಲ್ಲೇಶ ಸ್ವಗ್ರಹ।
ವೃತ್ತಾಂತ ಮಡದಿಗೆ ನೀಡಿದನು।
ಸ್ವಾಮಿ ತೋರಿರಿ ಈಶ್ವರನೆನಗೆ।
ಎನ್ನುತ ಆತುರ ಮಾಡಿದಳು ॥೩೧॥

ಈಶ್ವರನೆಂಬ ಹೆಸರಲಿ ಬದಲು।
ದರಿದೇವನೆಂಬುದು ಮತ್ತೊಂದು ಹೆಸರು।
ಮಲ್ಲೇಶ ದೊರೆಯ ಸಂದೇಶ ಬಂದಿತು।
ಹಿಪ್ಪರಿಗೆ ದರಿದೇವರು ಬರಲು ॥೩೨॥

ಗೆಳೆಯನ ಸಂದೇಶ ಮೇರೆಗೆ ದೇವ।
ನಡೆದನು ಹಿಪ್ಪರಗಿ ಊರಿಗೆ।
ಮಲ್ಲನು ಸ್ವಾಗತ ನೀಡದ ಬಂದೊಡೆ।
ಕುಶಲೋಪರಿಗಳ ಕೇಳಿದನು ॥೩೩॥

ವಿಚಿತ್ರ ವಿಷಯವು ನಡೆಯಿತು ಅಲ್ಲಿ।
ಗಂಗಾಮಯೆಯ ಮನದಲ್ಲಿ।
ದೇವನ ತುಂಬಿದ ಮೈಸಿರಿ ಕಂಡು।
ಗಂಗಾಮಾತೆ ಮೋಜಿತಳಂದು ॥೩೪॥

ಮದನ ಬಾಣದಿ ಅವಳು ದುಃಖ।
ಪ್ರೇಮಿಸಿ ಮೋಹದಿ ನುಡಿದಿಹಳು।
ದಾಸಿಯ ತೆರಹದಿ ನಾನಿರುವೆ।
ಇರುವೆನು ನಿಮ್ಮಯ ಅಡಿಯಲಿ ॥೩೫॥

ಮಲ್ಲೇಶ ದೊರೆ ಅರಮನೆ ಸೇರಲು।
ಹುಸಿ ಸಂಗತಿಯನ್ನು ನೀಡಿದಳು।
ಸೈನಿಕರೊಂದಿಗೆ ಬಂದರು।
ವನದೊಳು ಯುದ್ಧಕೆ ಆತುರರಾಗಿಹರು ॥೩೭॥

ಬೇಟೆಯನಾಡುತ ಈಶ್ವರ ಬಂದಿದ್ದ।
ಯುದ್ಧಕ್ಕೆ ಎದುರವನಾಗಿದ್ದ।
ಯುದ್ಧವೇ ನಡೆಯಿತು ಇಬ್ಬರೊಳು।
ಮಡಿದರು ಹಲವಾರು ರಣದಲಿ ॥೩೮॥

ರಕ್ತವು ಕೇವಲ ಹರಿದಿತ್ತಲ್ಲಿ।
ಮನದೊಳು ಹೋದರೊಳು ಕಲ್ಲುಗಳಲ್ಲಿ।
ಮಲ್ಲೇಶ ದೊರೆಯ ಸೈನಿಕರೆಲ್ಲ।
ಹತಬಲರಾದರು ಕಾಳಗದಲ್ಲಿ।
ಭಯದಿಂದ ನಡುಗಿದ ಸೈನಿಕರೆಲ್ಲ।
ಓಡಿದರೆಲ್ಲರು ದಿಕ್ಕುಗಳಲ್ಲಿ ॥೩೯॥

ಯುದ್ಧವು ಜೋರನು ಹಿಡಿದಿತ್ತು।
ಸೈನಿಕ ಸಮೂಹ ಓಡಿತ್ತು।
ರಾವುತರಾಯನು ಮಲ್ಲನು ಕೂಡಿ।
ದೇವರ ಜೊತೆ ಹೋರಾಡುತಲಿದ್ದರು।
ಈಶ್ವರ ಎಸೆದನು ಬಲೆಯ ಬೀಸಿ।
ರಾಯವು ನೃಪನಿಗೆ ಆಗಿತು।
ನರಳುತಲಿರುವ ದೊರೆ ಮಲ್ಲೇಶನ।
ರಾವುತನ ಜೊತೆ ಗೂಡಿದ ॥೪೦॥

ದೊರೆ ಮಲ್ಲೇಶನ ಹೆಗಲಿ ಹೊತ್ತು।
ರಣಾಂಗಣ ಬಿಟ್ಟರು ಇಬ್ಬರ ಕೂಡಿ।
ಕುದುರೆಯ ಬಾಲದವನೀಶ್ವರ ಕಡಿದ।
ತುಂಬಡನ್ನು ತನ್ನ ಬಳಿಯಲಿ ಇಟ್ಟ ॥೪೧॥

ಯುದ್ಧದ ವಾರ್ತೆಯು ತಂಗಿಯು ಪಡೆದು।
ಜಯದೇವಿ ಬಂದಳು ವನದೊಳಗೆ।
ಕಳವಳಗೊಂಡು ತಂಗಿ ಬೇಡಿದಳು।
ಯುದ್ಧವ ಬೇಡ ನಮ್ಮೊಳಗೆ ॥೪೨॥

ಯುದ್ಧದ ಮದವು ತುಂಬಿತ್ತವನಿಗೆ।
ಕಾಯುತಲಿದ್ದನು ವನದೊಳಗೆ।
ಕರುಣೆ ತುಂಬಿದ ತಂಗಿಯ ನುಡಿಗಳ।
ಪರಿಣಾಮವ ಇಲ್ಲವನೊಳಗೆ ॥೪೩॥

ದುಃಖದ ಹೊಳೆಯಲಿ ಹರಿದಂತಾದಳು।
ಹೊರಟಳು ಜಯದೇವಿ ಗೊತ್ತುಗಳಿಲ್ಲದೆ।
ಬಂದಳು ಜಯಾ ಮಡುವಿನ ತಟದಲಿ।
ಸೋದರಿ ಹಾರಿದಳಯ್ಯೋ ಮಡದಲಿ।
ತಂಗಿಯ ಅಗಲಿಂದತ್ತರು ಈಶ್ವರ।
ತಂಗಿಯ ಶೋಧಕೆ ವನದಲಿ ಚಲಿಸಿದ್ದ।
ಕೂಗುತಲಿದ್ದನು ತಂಗಿಯ ಹೆಸರು।
ಸುಳಿವಿಲ್ಲದೆ ಕಣ್ಣೀರ್ ಸುರಿಸಿದ್ದ ॥೪೪॥

ಶೋಧನೆ ಮಾಡುತ ಮಡದಡಿ ಬಂದನು।
ನಿಂತನು ಬುದ್ಧಿಗೆ ಏನೂ ಹೊಳೆಯದೆ।

ಹೊದ್ದುವ ಶಾಲು, ಚಪ್ಪಲಿ ಜೋಡಿ।
ಚಿಂತೆಯ ಚಿತೆಯಲಿ ಈಶ್ವರ ನೋಡಿ।
ಪ್ರಾಣವ ಅರ್ಪಣವಾಗಿದೆ ಎಂದು।
ಮುರಿದಿತಣ್ಣ ತಂಗಿಯ ಜೋಡಿ ॥೪೫॥

ಒಂದೆಡೆ ಈಶ್ವರ ಕುಳಿತೇ ಇದ್ದನು।
ವನದೊಳ್ ಕಣ್ಣೀರ ಕರೆಯುತ್ತಾ।
ಎತ್ತರ ಸ್ವರದಲಿ ಅತ್ತನು ಈಶ್ವರ।
"ತಂಗಿ ಜಯಾ" ಎಂಬುದೆ ಕೊರಗು ॥೪೬॥

ವ್ಯರ್ಥ ಜೀವನ ಎಂದಳುತಿದ್ದು।
ಈಶನ ಜಪಿಸಲು ಕುಳಿತಿಹನು।
ವಾಸಸ್ಥಾನವನಲ್ಲಂಚಿಸಿದ।
ಗೈಯಲು ತಪಸನು ಮೆಚ್ಚಿದ ಆ ಶಿವ।
ಕಾಣಿಸಿ ಶಾಪ ವಿಮುಕ್ತಗೊಳಿಸಿದೊಡೆ।
ಸೂಕ್ಷ್ಮ ರೂಪದಲ್ಲಿ ತಂಗಿಯು ಕಂಡಳು।
ಜಪತಪದಲ್ಲೇ ಕಳೆವುದು ಜೀವನ।
ಸಾರಲು ಸಂತಸ ಮಿಗಿಲಾಗಿತ್ತು।
ಬಿಲ್ವದ ಅಡಿಯಲ್ಲಿ ಬಿಟ್ಟನು ಬೀಡು।
ಧ್ಯಾನದಿ ಕಳೆದವು ದಿನರಾತ್ರಿಗಳು ॥೪೭॥

ಇರುತಿರೆ ಹೀಗೆ ಅಘಟಿತ ಘಟಿಸಿತು।
ಸೋತ ಮಲ್ಲೇಶ ಯುದ್ಧದಲಿ।
ಬಲುರಾಯಗೊಂಡು ಮರಳಿನ ರಾಜ।
ಬಂದನು ಹಿಪ್ಪರಗಿಯ ಅರಮನೆಗೆ।
ಈ ತೆರ ಬಳಲಿದ ರಾಜನ।

ಜೊತೆಯಲಿ ಕಂಡನು ಸೈನ್ಯದ ದುರ್ಗತಿಯ।
ಕಂಗರಟ್ಟಳು ರಾಣಿ ಗಂಗಾಮಾತೆಯು।
ತೋಚದೇ ದಿಕ್ಕೀ ಅಧೋಗತಿಗೆ।
ಮನದಾಳದಲಿ ಉದಾಸ ರಾಣಿಯ।
ಅರಿವಾಗದೆ ಬಲು ಕೊರಗಿದಳು ॥೪೮॥

ಪಶ್ಚಾತ್ತಾಪದಿ ಉರಿದಳು ರಾಣಿ।
ರಾಜನ ಸಂಕಟಕಿಟ್ಟಿಹಳು।
ಕೊಟ್ಟೆನು ಕಷ್ಟವ ಪತಿ ದೇವನಿಗೆ।
ವೆನ್ನುತ ಚಿಂತೆಯ ಗೈದಿಹಳು ॥೪೯॥
ಮಲ್ಲೇಶರಾಜನ ಪಾದವನಟ್ಟಿ।
ತನ್ನಾತಪ್ಪನು ಒಪ್ಪಿ ನುಡಿದಳು।
ಪಾಪಿಯ ಕಣ್ಣಿಂದ ಸುರಿದವು ನೀರು।
ಕ್ಷಮಿಸಲು ಗಂಗಾ ಬೇಡಿದಳು ॥೫೦॥

ಸತ್ಯದವನರಿತು ಮಲ್ಲೇಶರಾಜನು।
ಖಿನ್ನನಾಗಿ ಬಲು ನೋಡಿದನು।
ಕ್ಷಮಿಸಿದೆ ರಾಣಿಯ ದುರ್ಮತಿಯನು।
ಉದಾರ ಮನಸಿನ ರಾಜನು ಅವನು।
ಅರ್ಥವೆ ಇಲ್ಲದೆ ಸಂಸಾರ ವ್ಯರ್ಥ।
ಎಂದೆನ್ನುತ ರಾಜ್ಯವ ತ್ಯಜಿಸಿದನು।
ರಾಣಿಯ ಕುಟಿಲದಿ ಹೇಸಿದ ದೊರೆ।
ರಾಜ್ಯ ಭೋಗಗಳ ತೋರೆದಿಹನು ॥೫೧॥

ವಿರಾಗಿಯಂತೆ ನಡೆದನು ದೂರ।
ದರಿದೇವರ ಕಾಣಲು ನಿಂತನು।

ಮುಚ್ಚುಂಡಿ ವಚನದಡೆ ನಡೆದನು ಸರಸರ।
ಕಾನನತುಂಬ ಮಾಡಿದ ಶೋಧನೆ।
ಬೆಟ್ಟಗಳೇರಿ ಎತ್ತರಕೇರಿದ।
ಈಶ್ವರ ನರಸಿದ ದೃಶ್ಯ ವಿಲಕ್ಷಣ।
ಬಿಲ್ವದ ಅಡಿಯಲಿ।
ತಪಗೈತಿದ್ದ ದೃಶ್ಯವು ಕಾಣಿತು ಬಹು ಸುಲಕ್ಷಣ ॥೫೨॥

ನಿರ್ಮಲ ಯೋಗಿಯ ಚರಣದಡಿಯಲಿ।
ಆಸಕ್ತಿ ತುಂಬಿದ ದೊರೆ ನಿಂತಿದ್ದ।
ದೀರ್ಘದಂಡನೆಯ ದೊರೆಹಾಕಿದಲ್ಲಿ।
ಅವಿರತ ಅಶ್ರು ಸುರಿದವು ಅಲ್ಲಿ ॥೫೩॥
ಪಶ್ಚಾತ್ತಾಪ ಮನದಲಿ ತಳಮಳ।
ಆಗಲು ಚಿಂತೆಗಳೆಲ್ಲವು ಸರಿದವು।
ಗತಿಸಿದ ಸಂತಿ ಕೋಮಲ ಮನವನು।
ಪ್ರೇಮದಿ ನೋಡಿದ ಹೊರಹೊರಳಿ।
ಪರಮಾರ್ಥದ ಬೋಧನೆ ಈಶ್ವರ ಮಾಡಿದ।
ಸಂಸಾರ ಗೋಳಾಟ ಎಂದೂರೆದ ॥೫೪॥

ಮಲ್ಲೇಶ ಸರ್ವನು ಕಿವಿಗೊಟ್ಟು ಕೇಳಿದ।
ಪ್ರಪಂಚವೆಲ್ಲವು ಜೊಳ್ಳುಕಂಡಿತು।
ಈಶ್ವರ ಶಿವಮಂತ್ರ ನೀಡಿದ ರಾಯಗೆ।
ಆಧ್ಯಾತ್ಮ ದೊರೆಗೆ ಹಿತನೀಡಿತ್ತು ॥೫೬॥

ಕಷ್ಟವ ಕೊಟ್ಟಿದ್ದ ರಾಹುತರಾಯನು।
ಪ್ರಾಯಶ್ಚಿತ ಹೊಂದಲು ಬರುತಿದ್ದ।
ದಯೆಯನು ಹುಡುಕಿ ಅವ ಬರುತ್ತಿದ್ದ।
ವನದಲಿ ದಯೆ ಇದೆ ಎಂದರಿತಿದ್ದ ॥೫೭॥

ಕರುಣೆಯ ನೀಡಿ ಬರಮಾಡಿದ್ದದ।
ಕ್ಷಮಿಸಿರಿ ಇವನಿಗೆ ಹಿತ ಹೇಳಿದ್ದ।
ಇಬ್ಬರಿಗೂ ಉಪದೇಶ ನೀಡಿದ ಈಶ್ವರ।
ಹಿಪ್ಪರಿಗಿಗೆ ಮರಳಿ ಕಳುಹಿದ್ದ ॥೫೮॥

ಚೈತ್ರವದ್ಯ ಪಂಚಮಿಯೆಂದು।
ಈಶ್ವರ ಶಿವ ಶಿವಲೋಕದೊಳಗಿದ್ದ।
ಶಾಪವು ಅಳಿದು।
ಭೈರವನಂದು ಶಿವ ಸೇವೆಗೈಯಲು ಕುಳಿತಿದ್ದ ॥೫೯॥
ದೀರ್ಘಕಾಲದ ಈ ಮಂದಿರವು।
ತುಂಬಂತೆ ಭಕ್ತರ ಮನದಲಿ ಹರ್ಷ।
ಮಹಾತ್ಮ ಬಾಳಿದ ಸ್ಥಾನದಿಂದ ತುಂಬಂತೆ।
ವಿಶಾಲ ಜಾತ್ರೆಯು ಪ್ರತಿವರ್ಷ ॥೬೦॥



**ಬೆಳಗುವೆನಾರುತಿ ತಾಯೆ ಜಕ್ಕಮ್ಮದೇವಿಗೆ**

ಬೆಳಗುವೆನಾರುತಿ। ತಾಯೆ ಜಕ್ಕದೇವಿಗೆ।
ನಮಿಸುವೆ ಮಾತೆ ಅಮರ ಸಂಗೀತ। ಹಿಮನಗ ಜಾತೆ ಭುವನ
ವಿಖ್ಯಾತೆ। ಜನನಿ ಉದಾರಿ। ಘನ ಉಪಕಾರಿ
ದನುಜ ವಿದಾರಿ। ಧ್ವನಿ ಓಂಕಾರಿ
ವಾಣಿ ಮೃಡಾಣೆ। ಭುವನ ಕಲ್ಯಾಣಿ ತ್ರಿಭುವನ ರಾಣಿ।
ದೇವಿ ಭವಾನೀ ನಮ್ಮರಿಧಾಣಿ। ಶುಭ ವರದಾನಿ।
ಜಕ್ಕಮ್ಮಾಮಾತೇ ಬೆಳಗುವೆನಾರುತಿ॥

### ದರಿದೇವರಿಗೆ ಯಡಿಯ ಮಾಡೋಣ

ದರಿಯದೇವರಿಗೆ ಯಡಿಯ ಮಾಡೋಣ ದರಿದೇವರಿಗೆ॥
ದರಿದೇವರಿಗೆ ಯಡಿಯ ಮಾಡೋಣ, ಮಡಿ-ಹುಡಿಯಲಿ॥
ಪೊಡವಿಗದಿಕಯ್ಯನ್ನ। ಒಡೆಯ ಧರೀಯನಿಗೆ।
ಯಡಿಯ ಮಾಡೋಣ॥

ಕರಮದ ಅಡಿಗೆ ಮಾಡಿಸಿ। ಅದಕ್ಕೆ ಗುರುಮಂತ್ರವನು ಜಪಿಸಿ।
ಅರವುಳ್ಳ ಯಡಿಯ ಮಾಡೋಣ॥
ಕರದೊಳು ಪಿಡುಕೊಂಡು। ವರಮುಕ್ತಿ ಕೊಡುವಂಥ।
ಕರುಣಾಸಾಗರನಿಗೆ। ಯಡಿಯ ಮಾಡೋಣ ದರಿದೇವರಿಗೆ॥

ಆದಿ ಅಲ್ಲಮ ಗುರುವಿನಾ। ಸುಂದರಾ ಪಾದ ಪದ್ಮದಧ್ಯಾನಾ।
ಭೇದವಿಲ್ಲದೇ ಮಾಡುತ ದರೀಶನಿಗೆ॥
ನಾದಿ ಸ್ಥಾನಕ್ಕೆ ಬಂದು ಮೋಹದಿಂದ ಸಖೀ।
ಯಡಿಯ ಮಾಡೋಣ ದರೀದೇವರಿಗೆ॥



### ಮಂಗಳ ಮಂಗಳಂ ದರೀರಾಜನಿಗೆ

ಮಂಗಳ ಮಂಗಳಂ ದರೀರಾಜನಿಗೆ ಮಂಗಳಂ ಮಂಗಳಂ ದರೇಶ್ವರಗೆ
ಭಜಿಪರಭಕ್ತಿಗೊಲಿದು ದವಸ ಧಾನ್ಯ ಕೊಡುವ ದರೀರಾಜನಿಗೆ
ಬೇಡಿದ ಭಕ್ತರಿಗೆ ಸಿರಸಂಪದ ಕೊಡುವ ದರೀರಾಜ ನಿನ್ನ ಕೃಪಾದೃಷ್ಟಿ
ನನಗಿರಲಿ ತಂದೆ ಮಗುವಾಗಿ ಬೆಳಗುವೆ ಮುತ್ತಿನಾರುತಿ

ಕಾಡುವ ವಿಧಿ ನೀನು ಕರುಣಿಸುವ ಗೂಸು ನೀನು
ಸಕಲ ಸಿರಿಸಂಪತ್ತಿನ ಭಾಗ್ಯನಿಧಿ ಮನಸಿಟ್ಟು ಬೆಳಗುವೆ.

ರತ್ನದಾರುತಿಯ ಗುರು ನನಗೆ ಕರುಣಿಸು ಭುವದ ಭಾಗ್ಯ
ನನ್ನಯ ಬೆಳಕಾಯ್ತು ಬಾಳು ಬೆಳಕು. ತುಪ್ಪದಾರುತಿ ಹಚ್ಚಿ
ಬೆಳಗುವೆ, ಗುರುವೇ ಮಂಗಳಂ ಮಂಗಳಂ ದರಿರಾಜನಿಗೆ



**ಮಂಗಳ ಜಯ ಜಕ್ಕಮ್ಮದೇವಿ**

ಮಂಗಲಂ ಜಯ ಜಕ್ಕಮ್ಮದೇವಿಗೆ
ನಿನ್ನನಯನ ತೆರೆದು ನೋಡು ಶ್ರೀ ಜಕ್ಕಮ್ಮಾದೇವಿ
ಮಂಗಲಂ ಜಯ ಜಕ್ಕಮ್ಮದೇವಿಗೆ॥

ರುದ್ರ ದೇವರಿಗೈತಿ ವೀರಭದ್ರ ಪಡದಂಥಾ ಕರಿಮುಖ
ಧಾತಿ=ಕ್ಷುದ್ರ ದೈತ್ಯರ ಸೀಳಿ ಹಾಕಿ ನೀದ್ದೆ ದ್ರಾಂಖಾನೀ
ಗಿರಿಚಕ್ರ ಮಂಗಲಂ ಜಯ ಜಕ್ಕಮ್ಮದೇವಿಗೆ–
ಮಧು–ಕೈಟಭರನ್ನಕುಟ್ಟಿ
ಮುಂದೆ ಮಹಿಷಾಸುರರನ್ನು ಥರಥರಸಗಟ್ಟಿ ಸುಮ್ಮನೆ
ಸುಟ್ಟಿ ನಿನ್ನನು ಭಜಿಸುವ ಭಕ್ತರಿಗೆ ವರಗಳನ್ನು ಕೊಟ್ಟಿ
ಮಂಗಲಂ ಜಯ ಜಕ್ಕಮ್ಮದೇವಿಗೆ॥

ತ್ರೈತಾಯುಗದಲಿ ರೇಣುಕೆಯು ಕೃತಯುಗದಲಿ ಯಲ್ಲಮ್ಮ ನೀನು
ಮಂಗಲಂ ಜಯ ಜಕ್ಕಮ್ಮದೇವಿಗೆ॥



**ದರೀದೇವರ ಆರತಿ**

ಕಾಲನ ಕಾಲವಿದು ಉಜ್ಜನಿಯ ಮಹಾಕಾಲ
ಭೈತ್ಯರ ಮೇಲ್ಸಾಗಿ ದರೀದೇವ ಹೋದರು

ಹೊಡೆದು ಮಾಡಿದರು ದೈತ್ಯ ಸಂವಾರ॥
ರಾಜ್ಯವೆಲ್ಲ ಧನ್ಯವಿದು ದರೀದೇವರವತಾರ
ಮಹಿಮೆ ವರ್ಣನೆ ಮೀರಿದಿಹುದಿದು ಅಪಾರ
ಧನ್ಯದೇವರೇ, ನೀವು ಮೂರು ಜಗಕೆ ದಾತರು
ಘೋರ ಕಾನನದಲ್ಲಿ ಬಹುತಪಸು ಗೈದವರು॥
ಮಲ್ಲಿಕಾರ್ಜುನಂಗೆ, ಮಾತೆ ಜಯದೇವಿಗೆ ವಂದನೆ
ರಕ್ಷಣೆ ಇರೊಮುನ್ನವೆ ನಿನ್ನಗೆ ಶರಣು ಬಂದೆನು॥
ನಾನೊಬ್ಬ ಮತಿಹೀನ ಶರಣು ಬಂದೆನು ನಿಮ್ಮ ದ್ವಾರಕೆ
ಸ್ವೀಕರಿಸಿ ನನ್ನನ್ನು ಎತ್ತಿ ಹಿಡಿದು ರಕ್ಷಿಸಿ॥
ನೂಕಿಬಿಟ್ಟರೂ ನನಗೆ ನಿಮ್ಮನುಳಿದು ಯಾರೂ ಇಲ್ಲ
ನಿಮ್ಮ ಬಿಟ್ಟು ಪ್ರೀತಿ ಪ್ರೇಮ ತೋರುವವರು ಇಲ್ಲವೇ ಇಲ್ಲ॥
ಜಯದೇವ, ಜಯದೇವ, ಶರಣು ದರೀ ದೇವರಿಗೆ
ಗುಡ್ಡದಲ್ಲಿ ಗುಡಿ ನಿನ್ನದು, ಮೊಳಗುತ್ತೆ ನಗಾರಿ॥
ಬಂದಿಹೆನು ಕರುಣೆ ನೀ ತೋರಿ ದರೀ ದೇವರೆ
ಕಾಲಭೈರವನಿಗೆ ಆರತಿ ಬೆಳಗೋಣ ಜಯದೇವ ಜಯದೇವ॥
ಸಾತ್ವಿಕ ತಂದೆ ಸುಶೀಲಾ ಮಾತೆ,
ಜಯ ಹಾಡೋಣ ತಂಗಿ ಜಯದೇವಿಗೆ॥
ಆರತಿ ಬೆಳಗೋಣ ಶಂಕರ ಗಿರಿಜಾದೇವಿಗೆ
ಸಪ್ತರ್ಷಿಗಳ್ಗೆ, ಶೃಂಗಿ ಜಯ ವಿಜಯರ್ಗೆ॥
ರತಿ ತುಪ್ಪಹಟ್ಟಿ ಶಿವಲಿಂಗ ಗುರುವಿಗೆ
ರತಿ ಬ್ರಹ್ಮಾನಂದ ಶಂಕರಲಿಂಗರಿಗೆ॥
ಆರತಿ ಬೆಳಗೋಣ ಈಶ್ವರ ದರೀ ದೇವರಿಗೆ
ಯಶವಂತ ವೇತ್ತಾರೆ ಸುಖದ ದರೀ ದೇವರಿಗೆ॥



## ದರೆಯ ಧರ್ಮದಾತ ಶ್ರೀ ದರಿದೇವರ

ಧರೆಗೆ ಬಂದೆಯಾ ಭೈರವ ಕಾಲಭೈರವ
ಧರ್ಮವನ್ನು ಉಳಿಸಲು ಅಹಂಕಾರಣಿಸಲು ದೇವ
ಶಿವ ಸಂಕಲ್ಪ ನೆರವೇರಿಸಲು ನಮಗಾಗಿ ಬಂದೆಯಾ ಶ್ರೀ ಧರಿದೇವ
ಸಾಷ್ಟಾಂಗವಂದನೆ ಸ್ವೀಕರಿಸಯ್ಯ ಮಹಾನುಭಾವ।
ಸುಶೀಲಮನ ಉದರದಿಂದ ಜನಿಸಿ ಬಂದ ದೇವ
ಸಾತ್ವಿಕರಾಜನ ಮುದ್ದುಕಂದನಾದ ದರಿದೇವ
ಈಶ್ವರನೆಂದು ನಾಮಕರಣ ಮಾಡಿದ ಬ್ರಹ್ಮಾನಂದ ಗುರುದೇವ
ಶಿವಾಂಶ ಸಂಭೂತನೆ ನಿನ್ನಿಂದಲೆ ನಮಗೆ ಸಿಕ್ಕಿತಯ್ಯ ಎಲ್ಲಾ ವೈಭವ॥
ನಿನ್ನಾಗಮನ ಈ ಜಗದಲ್ಲಿ ಶುದ್ಧ ಭಕ್ತಿ ಹೆಚ್ಚಿಸಿತು
ಗುರುಪುಂಗವರ ಸಂತಸವನ್ನು ಇಮ್ಮಡಿಸಿತು
ಕಾರಣ ಜನ್ಮನಾದ ಶ್ರೀ ದರಿದೇವ ನಮಗಾನಂದವಾಯಿತು
ಕರೆದರೆ ಬರುವವನೆ ಭಗವಂತನೇ ನೀನಿರಲು ದಾರಿದ್ರ್ಯ ದೂರವಾಯ್ತು॥
ಬೆಟ್ಟದ ಮೇಲೆ ಭಕ್ತರಿಗಾಗೆ ಕಾದುಕುಂತ ದೇವ
ನಿನ್ನ ದೃಷ್ಟಿ ಬಿದ್ದ ಮೇಲೆ ಇನ್ನೆಲ್ಲಿರಬೇಕು ಅಭಾವ
ಭಜಿಸುವೆವು ನಿನ್ನ ನಾಮ ದರಿದೇವ ನೀಡಯ್ಯ ಎಲ್ಲಾ ಸುಖವ
ನಿತ್ಯವು ನೆನೆಯುವೆ ಶಿವರೂಪನೆ ಸನಿಹ ಬರದಿರಲಿ ದುಷ್ಟಪ್ರಭಾವ

–ಪಿ.ಗೋವಿಂದರಾಜುಲು
ಎಲ್.ಐ.ಸಿ.ಶಾಖೆ : ಜಮಖಂಡಿ



## ಸುಪ್ರಭಾತ

ಬೆಳಗಾಯಿತೇಳು ಕಳಂಬಡೆ ಮುನ್ನೂರೊಡೆಯ
ಏಳು ಬೆಳಗಾಯಿತು ಎದ್ದೇಳು
ಮುನ್ನೂರಹಳ್ಳಿಗಳ ಭಕ್ತಗಣವೆಲ್ಲ

ನಿನ್ನ ದರುಶನಕೆ ಬಂದಿಹರು
ದೊರೆ ಸಾತ್ವಿಕರಾಜ ರಾಣಿ ಸುಶೀಲಮ್ಮ
ತಂಗಿ ಜಕ್ಕವ್ವರೆಲ್ಲ ಆರತಿಯೊಂದಿಗೆ ನಿಂತಿಹರು
ಕಾಡು ಮೃಗ ಹುಲಿ-ಚಿರತೆಗಳೆಲ್ಲ
ನಿನ್ನ ಪಾದಕೆ ನಮಿಸುತಿಹವು
ಊಳಿಮಾನಿಗರೆಲ್ಲ
ಸಂಗೀತ ವಾದ್ಯಗಳ ನುಡಿಸುತಿಹರು
ವಂದಿಮಾದಿಗ ಭಟ್ಟಂಗಿಗಳೆಲ್ಲರೂ
ನಿನ್ನ ಮಹಿಮೆಯ ಹೊಗಳುತಿಹರು
ಬೆಳಗಾಯಿತೇಳು ಕಳಂಬಹೆ ಮುನ್ನೊರೊಡೆಯ

ಬೆಳಗಾಯಿತೇಳು ಕಳಂಬಡೆ ಮುನ್ನೊರೊಡೆಯ
ಏಳು ಬೆಳಗಾಯಿತು ಎದ್ದೇಳು
ಶಿವಪೂಜಿಪ ದೇವಗಣ ಭೈರವನೀನು
ಸಪ್ತರ್ಷಿಗಳವ ಕೃಪೆಯಿಂದ
ಭರತಭೂಮಿಯ ಪುಣ್ಯಭೂಮಿ
ಕಳಂಬಡೆಯಲಿ ಜನ್ಮತಾಳಿದೆ
ಪುತ್ರ ವಂಚಿತದೊರೆ ದಂಪತಿಗೆ
ಪುತ್ರಕಾಮೇಷ್ಠಿಯಾಗ ಫಲದಿಂದ
ಹುಟ್ಟಿದ ನೀನು ಮುಚ್ಚಂಡಿ
ಬ್ರಹ್ಮಾನಂದರ ಕರುಣಾಕಂದೇಶ್ವರ
ಸಕಲ ಶಾಸ್ತ್ರ ಪ್ರವೀಣ ರಣಧೀರ ಕಂಠೀರವ
ಯೋಗ ಪ್ರಭುವೇಶ್ವರನೆ
ಏಳು ಬೆಳಗಾಯಿತು
ಎದ್ದೇಳು ಕಳಂಬಡೆ ಮುನ್ನೂರೊಡೆಯ ಎದ್ದೇಳು
ಜಗನ್ಮೋಹಿನಿ ಕಾಮಾಂಧರಾಣಿ

ಗಂಗೆ ಮಾಳಮ್ಮಳಿಗೆ ಜ್ಞಾನ ದೀಕ್ಷೆಯ ನೀಡಿ
ಹತ್ತೂರ ಸರದಾರ ಶೂರ ಮಲ್ಲಯ್ಯ
ರಾಹುತರಾಯರ ಕುದುರೆ ಬಾಲ ಕತ್ತರಿಸಿದೆ ನೀ
ನೀನು ರಣರಂಗದಿ ಏಕಾಂಗಿ ಹೋರಾಡಿ
ಸಾವಿರ ಸರದಾರರ ರುಂಡ
ಚಂಡಾಡುವ ವೀರ ನೀ
ಅಜ್ಞಾನಿ ರತ್ನವ್ಯಾಪಾರಿಗಳ ಇದ್ದಲಿಗಂಟು ಮುತ್ತು ರತ್ನ
ಗಂಟಾಗಿಸಿದ ಪವಾಡ ಪುರುಷನೆ
ಕರ್ನಾಟಕ ಮಹಾರಾಷ್ಟ್ರ ಭಕ್ತಿ ಜನರ
ಶ್ರದ್ಧಾ ಸೇತುವೆ ನೀನು ಏಳು ಬೆಳಗಾಯಿತು
ಎದ್ದೇಳು ಕಲಮಡಿಮುನ್ನೂರೊಡೆಯ ಎದ್ದೇಳು

**ಕೃತ: ಶಿವತನಯ ಸುಧಾಕರ**

**ವಿಜಾಪುರ**



## ದರಿದೇವ ಸುಪ್ರಭಾತ

ಭರತಭೂಮಿಯ ಕಳಂಬಡೆ ಮುನ್ನೂರೊಡೆಯನಿಗೆ ಸುಪ್ರಭಾತ।
ಕರ್ನಾಟಕ–ಮಹಾರಾಷ್ಟ್ರ ಕೊಂಡಿಯೊಡೆಯನಿಗೆ ಸುಪ್ರಭಾತ।
ಆದಿ ಕುರುಹು ಅಂತ್ಯನಾಡಿಯೊಡೆಯನಿಗೆ ಸುಪ್ರಭಾತ।
ದೇವಲೋಕದಿ ಭಕ್ತಿ–ಶ್ರದ್ಧಾಪೂರ್ವಕ ಶಿವಾರಾಧನಿಗೆ ಸುಪ್ರಭಾತ।
ಸ್ವರ್ಗಲೋಕ ದೇವಗುರು ಸಪ್ತರ್ಷಿಗಳವಕೃಪೆಯನಿಗೆ ಸುಪ್ರಭಾತ।
ಧರಿಸಿರಿ ಕಳಂಬಡೆಯಲಿ ಶಾಪವಿಮೋಚನಾರ್ಥ ಜನ್ಮವಿತ್ತವನಿಗೆ ಸುಪ್ರಭಾತ।
ಮಣಿಚೂಲ ಪರ್ವತದಿ ತಪಸ್ವಿಗಳನುಷ್ಠಾನಭಂಗ
ಸಂಹಾರಕ ಮೈಲಾರ ಮಾರ್ತಾಂಡ ಭೈರವಶಿವಗೆ ಸುಪ್ರಭಾತ।

ಜಗಕ್ಷೋಭೆ ನಿರ್ನಾಮಕ ಜಗದೇಕವೀರ
ಭಗವದಂಶ ಭೈರವಗೆ ಸುಪ್ರಭಾತ।
ಜಗದ ಅಶಾಂತಿ, ಅನೀತಿ, ಅಧರ್ಮಗಳ
ಕಿತ್ತೆಸೆಯ ಬಂದ ದೇವದೂತಗೆ ಸುಪ್ರಭಾತ।
ಕಳಂಕ ಮುನ್ನೂರು ಪ್ರಾಂತ ಪಾಲಕದೊರೆ
ಜಗದೇವವಂಶ ಸಾತ್ವಿಕ ರಾಜರಿಗೆ ಸುಪ್ರಭಾತ।
ಸಂತಾನಪ್ರಿಯ ಯುವರಾಣಿ ಸುಶೀಲಮ್ಮಳ
ಪುತ್ರಕಾಮೇಷ್ಠಿಯಾಗಫಲಗಳಿಗೆ ಸುಪ್ರಭಾತ।
ಮುಚ್ಚಂಡಿ ಶಿವಯೋಗಿ ಗುರುಶ್ರೀ ಬ್ರಹ್ಮಾನಂದ
ಕೃಪಾಪಾತ್ರ ಶಿಶುವಿಗೆ ಸುಪ್ರಭಾತ।
ಕಳಂಬಡೆ ಭೂಪಾಲ ಪ್ರತಿಪುತ್ರೇಶ್ವರ
ಭೈರವವತಾರಪುರುಷಗೆ ಸುಪ್ರಭಾತ।
ರಾಜನ್ಯಾಯ–ನೀತಿ–ಜಪ–ತಪ
ಸಕಲ ಕಲಾವಲ್ಲಭೇಶ್ವರನಿಗೆ ಸುಪ್ರಭಾತ।
ಕತ್ತಿಯಿಂದ ಸಾವಿರ ಸರದಾರರನ್ನು
ಚೆಂಡಾಡುವ ಛಲದಂಕಮಲ್ಲನಿಗೆ ಸುಪ್ರಭಾತ।
ಕಾನನದಿ ಏಕಾಂಗಿ ಹೋರಾಡಿ
ಹುಲಿ–ಚಿರತೆ ಕೊಲ್ಲುವ ವೀರಧೀರನಿಗೆ ಸುಪ್ರಭಾತ।
ಮನೋಹರ, ಜಗನ್ಮೋಹನ
ಜಗದೇಕವೀರೇಶ್ವರನಿಗೆ ಸುಪ್ರಭಾತ।
ಹಿಪ್ಪರಗಿ ಮಾಂಡಲಿಕ ಜಗಮುಂಡ
ಮಲ್ಲಯ್ಯ–ರಾವುತರಾಯರಿಗೆ ಸಿಂಹಸ್ವಪ್ನಂಗೆ ಸುಪ್ರಭಾತ।
ಜಗದೇಕಸುಂದರೆ ಕಾಮಾಂಧ ಗಂಗೆಮಾಳಮ್ಮಳಿಗೆ
ಜ್ಞಾನ ದೀಕ್ಷೆ ನೀಡಿದವಗೆ ಸುಪ್ರಭಾತ।
ತ್ರಿಭಾಷಾ ಪಂಡಿತ, ಕ್ಷಾತ್ರ ತೇಜ, ಬಹುಜಾತಿ ಪ್ರೇಮಿ
ದೇವಸಾಕ್ಷಾತ್ಕಾರಗೆ ಸುಪ್ರಭಾತ।
ಸರ್ವಧರ್ಮ ಸಮನ್ವಯದಿ ಸಾಕಾರ ಕಂಡು

ನಿರಾಕಾರವಾದವಗೆ ಸುಪ್ರಭಾತ।
ಜನಮೂಢನಂಬಿಕೆಯುಳಿಸಿ ನಾಸ್ತಿಕರನು
ಆಸ್ತಿಕರನ್ನಾಗಿಸಿದ ಮಹಾತ್ಮನಿಗೆ ಸುಪ್ರಭಾತ।
ಇಂದಾಪುರ ರತ್ನವ್ಯಾಪಾರಿ ನಾರಾಯಣಗೆ
ದಟ್ಟಡವಿಯಲಿ ರತ್ನ ಪರೀಕ್ಷಕನಾದವಗೆ ಸುಪ್ರಭಾತ।
ನಾರಾಯಣನ ಇದ್ದಲಿ ಗಂಟುಗಳ
ಮುತ್ತು ರತ್ನಗಂಟಾಗಿಸಿದ ಪವಾಡಪುರುಷಗೆ ಸುಪ್ರಭಾತ।
ರತ್ನವ್ಯಾಪಾರಿ ಮನೆಯಲಿ
ಆಳಾಗಿ ದುಡಿದೀಶ್ವರನಿಗೆ ಸುಪ್ರಭಾತ।
ಕಾಡುನಾಡಾದ ಭೂಮ್ಯದಿ ಆಧ್ಯಾತ್ಮಸೆಲೆ
ಜಲದಿ ಪುಣ್ಯದ ಬೀಜ ಬಿತ್ತಿ ಹಂಚಿದವಗೆ ಸುಪ್ರಭಾತ।
ವಿವೇಕಾನಂದ, ರಾಮಕೃಷ್ಣ, ಏಸು, ಪೈಗಂಬರರ
ಮನುಕುಲ ಪ್ರೇಮಪಾತ್ರಗೆ ಸುಪ್ರಭಾತ।
ಯೋಗಶಕ್ತಿ, ಪರಾಶಕ್ತಿ, ನಿರ್ವಿಕಲ್ಪ ಸಮಾಧಿ ಸ್ಥಿತಿ
ಸ್ಥಿತಪ್ರಜ್ಞಯೊಡೆಯಗೆ ಸುಪ್ರಭಾತ।
ಜಗದಂಬಾ ಜಕ್ಕವ್ವ, ಸುಮಂಗಲೆಯರ
ಮುತ್ತೈದೆ ಭಾಗ್ಯಪ್ರತೀಕಳಿಗೆ ಸುಪ್ರಭಾತ।
ಮಹಾಸತಿ ಗಲ್ಲು, ಸಪ್ತ ಮಾತೃಕೆಗಳು, ಮುರಳೀಥಡಿ
ನಂದಿಗಣೇಶ ಪ್ರಭಾವಳಿಯ ಅಶ್ವಾರೂಢಗೆ ಸುಪ್ರಭಾತ।
ಭವರೋಗ ವೈದ್ಯ, ಭಕ್ತರಭೀಷ್ಟಕ, ನೆನೆದವರ
ಮನದಿರುವ ಧರಿಸಿರಿ ಜ್ಯೋತಿ ಪ್ರಕಾಶಗೆ ಸುಪ್ರಭಾತ।

ಕೃತ: ಶಿವತನಯ ಸುಧಾಕರ
ವಿಜಾಪುರ.



## ಬಯಲ ಬ್ರಹ್ಮ

ಕಷ್ಟದ ವೇಳೆಗೆ ನಿಷ್ಠೆಯ ಬೆಟ್ಟ ನೀನಾಗು
ಕಷ್ಟನಷ್ಟಗಳ ನಡುವೆ ವೈರಾಗ್ಯದ ಶಿಖರವಾಗು

ಸಂಸಾರದೀ ವಿಷಯ ಸಾಗರದ ಮಧ್ಯದಲ್ಲಿ
ನಂಜುಂಡ ನಂಜುಡೇಶ್ವರನೇ ನೀನಾಗು।
ಸುಡುವ ಬೆಂಕಿಯ ನಡುವೆ
ಥಳಥಳ ಹೊಳೆಯುವ ಅಪರಂಜಿ ನೀನಾಗು
ತಾಪತ್ರಗಳ ಕಡಲಿ ಮಧ್ಯದಲ್ಲಿ
ಅಮೃತದ ಕಳಸ ನೀನಾಗಿ ನಿಲ್ಲು!
ವಿಷಯ ಪಂಚಾಗ್ನಿ ಕಾಡ್ಗಿಚ್ಚಿನಂತೆ
ಧಗ ಧಗಿಸಿ ಉರಿಯುತಿರಲು
ಪುರುಷ ಸಿಂಹನೇ ನೀನಾಗಿ ಗರ್ಜಿಸು
ತಾಪತ್ರಯಗಳ ತ್ರಿಲೋಕದಲಿ
ತ್ರೀನೇತ್ರನಂತೆ ನಸು ನಗುತಲಿರು!
ಸ್ತುತಿ ನಿಂದೆಗಳ ಸಮಗಂಡ
ಶರಣ ಶಿವಯೋಗಿ ನೀನಾಗು
ಮರಣವನ್ನು ಗೆದ್ದ ಮೃತ್ಯುಂಜಯ ನೀನಾಗು
ಸೃಷ್ಠಿ ಸ್ಥಿತಿಲಯಗಳ ಶಿವನಾಟದಲ್ಲಿ
ಬಯಲು ಬ್ರಹ್ಮನೇ ನೀನಾಗು!

**ಡಾ. ಶ್ರದ್ಧಾನಂದ ಸ್ವಾಮಿಗಳು**
**ಗುರುದೇವಾಶ್ರಮ, ಕಾಗವಾಡ-ಸದಲಗಾ**



## ಶ್ರೀ ದರಿದೇವರ ಅಷ್ಟೋತ್ತರ ಶತನಾಮಾವಳಿ

ಓಂ ದರಿದೇವ ಲಿಂಗಾಯ ನಮಃ
ಓಂ ಪರಮ ಪುರುಷಾಯ ನಮಃ
ಓಂ ಪರಾತ್ಪರರಾಯ ನಮಃ
ಓಂ ಪರತರಾನಂದಾಯ ನಮಃ

ಓಂ ಪರಮಕಾರುಣ್ಯಾಯ ನಮಃ
ಓಂ ಶಿವ ಪ್ರಿಯಾಯ ನಮಃ
ಓಂ ಪ್ರಶಾಂತ ಚಿತ್ತಾಯ ನಮಃ
ಓಂ ಅನಂತಾಯ ನಮಃ
ಓಂ ನಮಃ
ಓಂ ಅನಂತ ಶ್ರೀ ವಿಭೂಷಿತಾಯನಮಃ
ಓಂ ಮಹಾ ಶೋರಾಯ ನಮಃ
ಓಂ ಉಗ್ರ ದಂಷ್ಟ್ರಾಯ ನಮಃ
ಓಂ ಭಾವಗೋಚರಾಯ ನಮಃ
ಓಂ ಸತ್ಯಪ್ರತಿಜ್ಞಾಯ ನಮಃ
ಓಂ ನಿತ್ಯ ಪೂರ್ಣಾಯ ನಮಃ
ಓಂ ನಿರ್ವಿಕಾರಾಯ ನಮಃ
ಓಂ ನಿರುಪಾಧಿರಾಯ ನಮಃ
ಓಂ ನಿರಂಜನಾಯ ನಮಃ
ಓಂ ನಿರಾಲಿಂಬಾಯ ನಮಃ
ಓಂ ನಿರ್ಗುಣಾಯ ನಮಃ
ಓಂ ನಿಜಸುಖನಿಲಯಾಯ ನಮಃ
ಓಂ ಚಿದಬಂಡಾಯ ನಮಃ
ಓಂ ಪುಣ್ಯ ಚರಿತಾಯ ನಮಃ
ಓಂ ಶಶಿವದನಾಯ ನಮಃ
ಓಂ ಸತ್ಯಾಶ್ರಯಾಮ ನಮಃ
ಓಂ ಸತ್ಯ ಸ್ವರೂಪಾಯ ನಮಃ
ಓಂ ಸರ್ವಾತ್ಮನೇ ನಮಃ
ಓಂ ಜೀತೇಂದ್ರಿಯಾಯ ನಮಃ
ಓಂ ಉರ್ಧ್ವಕೇಶಾಯ ನಮಃ
ಓಂ ಖಡ್ಗಹಸ್ತಾಯನಮಃ

ಓಂ ಸಕಲ ಜೀವಾಧಾರಾಯ ನಮಃ

ಓಂ ಮುಮುಕ್ಷಜನ ಸೇವಾಯ ನಮಃ

ಓಂ ಅಮೃತಾಯ ನಮಃ

ಓಂ ತ್ರಿಗಣಾತೀತಾಯ ನಮಃ

ಓಂ ತ್ರಿತಾಪವರ್ಜಿತಾಯ ನಮಃ

ಓಂ ಭಾವತೀತಾಯ ನಮಃ

ಓಂ ಬಂಧವಿಮೋಚನಾಯ ಓಂ ಭಾವತೀತಾಯ

ಓಂ ಭಕ್ತಿ ಲೋನಾಯ ಓಂ ಭಾವತೀತಾಯ

ಓಂ ದರಿಗೋಭಾ ಓಂ ಭಾವತೀತಾಯ

ಓಂ ಮುಖಾಂತರಾಯ ಓಂ ಭಾವತೀತಾಯ

ಓಂ ಮಹಾತೇಜಸೇ ಓಂ ಭಾವತೀತಾಯ

ಓಂ ಮಹಾಭಯ ನಿವಾರಣಾಯ ಓಂ ಭಾವತೀತಾಯ

ಓಂ ಸಾತ್ವಿಕರಾಜ ಸಂಜಾತಾಯ ಓಂ ಭಾವತೀತಾಯ

ಓಂ ಅಶ್ವಾರೂಢ ಮಹಾದೇವಾಯ ನಮಃ

ಓಂ ಮಾರ್ತಾಂಡ ಭೈರವಾಯ ನಮಃ

ಓಂ ಗಣಕೋಟಿಯುತಾಯ ನಮಃ

ಓಂ ಧರೀಖಾನ್ ಲಿಂಗಾಯ ನಮಃ

ಓಂ ಮಣಿಮಲ್ಲದೈತ್ಯ ಸಂಹಾರಾಯ ನಮಃ

ಓಂ ಭುವನೇಶ್ವರಾಯ ನಮಃ

ಓಂ ದೇವಾದಿದೇವಾಯ ನಮಃ

ಓಂ ಸೂರ್ಯಕೋಟಿ ಸಮಪ್ರಭಾಯ ನಮಃ

ಓಂ ಅಷ್ಟ ಸಿದ್ಧಿ ಸಮಾಯುಕ್ತಾಯ ನಮಃ

ಓಂ ಸುರಶ್ರೇಷ್ಠಾಯ ನಮಃ

ಓಂ ಮಹಾಬಲಾಯ ನಮಃ

ಓಂ ವರದಾತಾಯ ನಮಃ

ಓಂ ಕಲಿಪ್ರಮಥನಾಯ ನಮಃ

ಓಂ ಧರೆಸೂರಲಿಂಗಾಯ ನಮಃ

ಓಂ ಮುಕ್ತಿ ಮಂದಿರಯ ನಮಃ

ಓಂ ಭಕ್ತಾಧೀನಾಯ ನಮಃ

ಓಂ ಭಕ್ತಪ್ರಾಣಾಯ ನಮಃ

ಓಂ ಭವ ವರ್ಜಿತಾಯ ನಮಃ

ಓಂ ಮಹಾವೀರ ಭೈರವಾಯ ನಮಃ

ಓಂ ಭಂಡಾರ ಭೂಷಿತಾಯ ನಮಃ

ಓಂ ಭಸಿತ ಭೂಷಿತಾಯ ನಮಃ

ಓಂ ಭವಗಿರಿ ವಜ್ರಾಯ ನಮಃ

ಓಂ ಭವ ಭರ್ಗಾಯ ನಮಃ

ಓಂ ಧರ್ಮ ಮೂರ್ತಯೆ ನಮಃ

ಓಂ ವರದಾಯಕ ನಮಃ

ಓಂ ದರಿಯಪ್ಪ ದೇವನೆ ನಮಃ

ಓಂ ದರಿ ಕೋಳ ವಾಸಾಯ ನಮಃ

ಓಂ ಜಯದೇವಿ ದರ್ಶನಾ ಪ್ರಯಾ ನಮಃ

ಓಂ ವರಮಂತ್ರತಾಣಾಯ ನಮಃ

ಓಂ ಚಿತ್ರೈದೀವಾಯ ನಮಃ

ಓಂ ಶವಹಸ್ತ ಮುಕ್ತಾಯ ನಮಃ

ಓಂ ದೇವಾಂತರ ಸ್ಮರಣ ವಿದೂರಾಯ ನಮಃ

ಓಂ ಭುವಿಸಂಗ ವರ್ಜತಾಯ ನಮಃ

ಓಂ ಭವಿಪಾಕ ನಿರಾಕೃತಾಯ ನಮಃ

ಓಂ ಪರಸ್ತ್ರಿ ಸೋದರಾಯ ನಮಃ

ಓಂ ಸದಾಚಾರ ಸಂಪನ್ನಾಯ ನಮಃ

ಓಂ ಸಜ್ಜನ ಪ್ರಯಾಯ ನಮಃ

ಓಂ ವಿಶ್ವವಂದ್ಯಾಯ ನಮಃ

ಓಂ ವಿಶ್ವಾದಾರಾಯ ನಮಃ

ಓಂ ವಿಶ್ವೇಶ್ವರಾಯ ನಮಃ
ಓಂ ವಿಶ್ವತೀತಾಯ ನಮಃ
ಓಂ ಜಿತ ರಾಮಾಯ ನಮಃ
ಓಂ ಸುರೇಂದ್ರ ವಂದಿತ ಪಾದಾಯ ನಮಃ
ಓಂ ತುಷ್ಟಿಪ್ರದಾಯರಾಯ ನಮಃ
ಓಂ ನಾಶವಿಮೋಚಕಾಯ ನಮಃ
ಓಂ ತರಿ ವಿಕ್ರಮಾಯ ನಮಃ
ಓಂ ಪಾತ್ರ ಹಸ್ತಾಯ ನಮಃ
ಓಂ ಭಕ್ತರ ರಕ್ಷಾಯ ನಮಃ
ಓಂ ಭಕ್ತಿ ಮುಕ್ತಿ ಪ್ರದಾಯ ನಮಃ
ಓಂ ಮೃತ್ಯುಂಜಯಾ ನಮಃ
ಓಂ ಮುರಘೇಂದ್ರಾಯ ನಮಃ
ಓಂ ಶ್ರೀಕಂಠಾಯ ನಮಃ
ಓಂ ಅಮೃತಮೋದಾಯ ನಮಃ
ಓಂ ಕಾಲಕಾಲಾತೀತಾಯ ನಮಃ
ಓಂ ಯೋಗ ರೂಢಾಯ ನಮಃ
ಓಂ ಅದ್ವೈತಾಯ ನಮಃ
ಓಂ ಪ್ರಜಾಪತೆಯೇ ನಮಃ
ಓಂ ಪಾವನಾಯ ನಮಃ
ಓಂ ಕೃಪಾ ಸಿಂಧೂವೇ ನಮಃ
ಓಂ ಸುಜ್ಞಾನ ಸ್ವರೂಪಾಯ ನಮಃ
ಓಂ ಧರೀಸಿರಿಯೇ ನಮಃ
ಓಂ ಕನಮಡಿವಾಸಾಯೇ ಧರೇಶ್ವರಾಯ ನಮಃ ॥೧೦೮॥

ಶ್ರೀ ಧರೇಶ್ವರ ಅಷ್ಟೋತ್ತರ ಶತ ನಾಮಾವಳಿ ಯಜಪೇ ಭಕ್ತಿ ಮಾನ್ನರ ವಿದ್ಯಾಬುದ್ಧಿ ಧನೈಶ್ವರ್ಯರ ಪುತ್ರ ಪೌತ್ರ ಸಂಪದಂ ಆಯುರಾರೋಗ್ಯಂ ಶಿವಪದಂ ಶಿವ ಸಾಯುಜ್ಯ ಪದಮಾಪ್ನುತು ಸರ್ವದಾ

ಇತಿ ಗುರುರಾಜಕೃತಿ ಅಷ್ಟೋತ್ತರ ಶತನಾಮಾವಳಿ ಸಂಪೂರ್ಣಂ



## ಜಯತು ಜಯತು ಜಕ್ಕಮ್ಮ

ಶ್ರೀ ಜಯತು ಜಯತು ಜಕ್ಕಮ್ಮ ಜಯತು ಜನನಿ ಜಕ್ಕಮ್ಮ
ಆರತಿ ಬೆಳಗುವೆ ಪಾದಕೆ ಎರಗುವೆ ಮಂಗಲ ಮೂರ್ತಿ ಜಕ್ಕಮ್ಮ॥
ಬಾಲಕರೆಲ್ಲರು ಭಾವಭಕ್ತಿಯಿಂದ ಬಂದೆವ ನಿನ್ನ ಗುಡಿಗೆಮ್ಮ
ತಂದೆವ ನೀಮಗ ಹೂವಮ್ಮ
ಚಂದೂಳ ಸಿರಿಮಲ್ಲಿಗೆ ಮುಡಿದಿಟ್ಟುಕೊ ನಮ್ಮಮ್ಮ॥

ನವರಾತ್ರಿಯಲ್ಲಿ ಶಿವರಾತ್ರಿ ಅಲ್ಲಿ ನವವಿಧ ಪೂಜೆ ನಿಮಗಮ್ಮ
ಅಣ್ಣತಂಗಿಗಿ ಆರುತಿ ಮಾಡಿ ಮಂಗಲಪಾಡೋವೆ ನಮ್ಮಮ್ಮಾ॥

ಕನಮಡಿಯ ಭಕ್ತರು ಕೈಮುಗಿದು ಬೇಡುವರು ಕರುಣೆ ತೋರು ನಮ್ಮಮ್ಮ
ಕನಮಡಿಯ ದೇವಿ ನಿನಮ್ಮ
ನಮ್ಮ ಮುರುಘೇಂದ್ರ ಶಿವಯೋಗಿ ಕರುಣೆತೋರಿ ಪದವ ರಚಿಸಿದಿ ನಮ್ಮಮ್ಮ॥

ಭಕ್ತರೆಲ್ಲಾರೂ ಕೂಡಿ ಲಕ್ಷದೀಪೋತ್ಸವ ಮಾಡಿ ಜ್ಞಾನದಜ್ಯೋತಿ ನಿಮಗಮ್ಮ
ಬೆಳಗುವೆ ತಾಯಿ ನಿಮಗಮ್ಮ॥

**–ಶ್ರೀ ವೇ. ಲೋಕನಾಥ.ಗು. ವಿರಕ್ತಮಠ**
**ಕನಮಡಿ.**



## ದರಿಜ್ಯೋತಿ

ಜ್ಯೋತಿ ಬೆಳಗುತಿದೆ ಜ್ಯೋತಿ
ಶ್ರೀರಾಜದೈವ ದರಿದೇವರೆ ಜ್ಯೋತಿ।
ಸಾತ್ವಿಕರಾಜ ಸುಶೀಲಮ್ಮನವರ ಸಂಜಾತ ಜ್ಯೋತಿ
ಕಳಬಂಡೆ ಮುನ್ನೂರ ಸಂಭೂತ ಜ್ಯೋತಿ
ಗುರುಬ್ರಹ್ಮಾನಂದದಲಿ ಬೆಳೆದ ದೈವಾಂಶ ಜ್ಯೋತಿ।
ಜ್ಯೋತಿ ಬೆಳಗುತಿದೆ ಜ್ಯೋತಿ

ತ್ರಿ–ಭಾಷಾ ಪಂಡಿತ ಜ್ಯೋತಿ

ನ್ಯಾಯ ನೀತಿ ಕ್ಷಾತ್ರತೇಜದಾಗರ ಜ್ಯೋತಿ

ಭಾರತ ದೇಶದಿ ಮೆರೆದ ಜ್ಯೋತಿ

ಜ್ಯೋತಿ ಬೆಳಗುತಿದೆ ಜ್ಯೋತಿ

ಜಾತಿಮತಗಳ ಅಳಿಸಿದ ಜ್ಯೋತಿ

ಸದಾಚಾರದಿ ನಡೆಸಿದ ಜ್ಯೋತಿ

ಮುಕ್ತಿಗೆ ಹಾದಿಯ ಹಿಡಿಸಿದ ಜ್ಯೋತಿ

ಜ್ಯೋತಿ ಬೆಳಗುತಿದೆ ಜ್ಯೋತಿ

ಜನರಧರ್ಮವ ಅಳಿಸಿದ ಜ್ಯೋತಿ

ನಾಸ್ತಿಕರನು ಆಸ್ತಿಕರನಾಗಿಸಿದ ಜ್ಯೋತಿ

ಪರಮಾರ್ಥ ಪ್ರಮಥರನು ಬೆಳೆಸಿದ ಜ್ಯೋತಿ

ಜ್ಯೋತಿ ಬೆಳಗುತಿದೆ ಜ್ಯೋತಿ

ನನ್ನಲ್ಲಿರುವ ಅಂತರಜ್ಯೋತಿ

ಎಲ್ಲರಲ್ಲಿರುವ ಗುಪ್ತಜ್ಯೋತಿ

ನೆನೆದವರ ಮನದಲಿರುವ ದಿವ್ಯಜ್ಯೋತಿ

ಜ್ಯೋತಿ ಬೆಳಗುತಿದೆ ಜ್ಯೋತಿ

ಶಿವತನಯ ಸುಧಾಕರರ ಪರಂಜ್ಯೋತಿ

ಈಶ್ವರಲಿಂಗ ಶಿವಲಿಂಗರ ಅನುಗ್ರಹ ಜ್ಯೋತಿ

ಓಂ ನಮಃ ಶಿವಾಯ ಕಲಿಸಿದ ಜ್ಯೋತಿ

ಜ್ಯೋತಿ ಬೆಳಗುತಿದೆ ಜ್ಯೋತಿ

ಶ್ರೀ ರಾಜದೈವ ದರಿದೇವರ ಜ್ಯೋತಿ

**ಕರ್ತೃ: ಶಿವತನಯ ಸುಧಾಕರ**

**ವಿಜಾಪುರ.**



## ಸಂದರ್ಶನದಲ್ಲಿ ಮಾಹಿತಿ ನೀಡಿದ ಮಹನಿಯರು

| ಕ್ರ.ಸಂ. | ಹೆಸರು | ವಯಸ್ಸು | ಸಂದರ್ಶನದ ದಿನಾಂಕ |
|---|---|---|---|
| ೧. | ಶ್ರೀ ಬಿ. ಎಸ್. ಮಂಗಸುಳಿ<br>ನಿವೃತ್ತ ಮುಖ್ಯಾಧ್ಯಕ್ಷರು, ಮುಚ್ಚಂಡಿ | ೬೮ | ೦೯-೧೦-೨೦೧೧ |
| ೨. | ಸುರೇಶಗೌಡ. ಪಾಟೀಲ, ಕೀರ್ತನಕಾರರು<br>ಮುಚ್ಚಂಡಿ | ೭೫ | ೧೮-೧೧-೨೦೧೧ |
| ೩. | ಶ್ರೀ ಸಿದ್ಧಣ್ಣ ಮೆಂಡಿಗೇರಿ<br>ಹಿರಿಯರು ಮುಚ್ಚಂಡಿ | ೭೨ | ೨೨-೧೨-೨೦೧೧ |
| ೪. | ಶ್ರೀ ಭೀಮಗೊಂಡ ಬಿರಾದಾರ<br>ನಿವೃತ್ತ ಶಿಕ್ಷಕರು, ಮುಚ್ಚಂಡಿ | ೭೩ | ೦೨-೦೧-೨೦೧೨ |
| ೫. | ಶ್ರೀ ಹಣಮಂತಗೌಡ ಪಾಟೀಲ<br>ನಿವೃತ್ತ ಪೋಲೀಸ ಪಾಟೀಲ, ಮುಚ್ಚಂಡಿ | ೭೫ | ೦೪-೦೧-೨೦೧೨ |
| ೬. | ಶ್ರೀ ಈರಗೊಂಡಗೌಡ ಪಾಟೀಲ<br>ಹಿರಿಯರು, ಮುಚ್ಚಂಡಿ | ೬೮ | ೦೯-೦೧-೨೦೧೨ |
| ೭. | ಶ್ರೀ ಭೀಮಗೊಂಡ ತನಂಗಿ<br>ನಿವೃತ್ತ ಶಿಕ್ಷಕರು, ಮುಚ್ಚಂಡಿ | ೭೦ | ೦೨-೦೨-೨೦೧೨ |
| ೮. | ಶ್ರೀ ಭೀಮಣ್ಣ ಕುಂಬಾರ, ಮುಚ್ಚಂಡಿ<br>ಹಿರಿಯರು | ೬೫ | ೦೨-೦೨-೨೦೧೨ |
| ೯. | ಶ್ರೀ ಮಲ್ಲಪ್ಪಾ ಪೋಲಿಸ<br>ಹಿರಿಯರು ಮುಚ್ಚಂಡಿ | ೮೦ | ೦೮-೦೩-೨೦೧೨ |
| ೧೦. | ಶ್ರೀ ಚನ್ನಯ್ಯ ಹಿರೇಮಠ<br>ನಿವೃತ್ತ ಬ್ಯಾಂಕ ಅಧಿಕಾರಿಗಳು, ಮುಚ್ಚಂಡಿ | ೬೮<br>೬೮ | ೦೯-೦೨-೨೦೧೨<br>೦೯-೦೨-೨೦೧೨ |
| ೧೧. | ಶ್ರೀ ಹನಮಂತ ಗುರವ<br>ಶಂಕರಲಿಂಗನ ಪೂಜಾರಿ ಮುಚ್ಚಂಡಿ | ೪೯ | ೧೮-೦೩-೨೦೧೨ |



# ಛಾಯಾ ಚಿತ್ರಗಳು



ಶ್ರೀ ದರಿದೇವರ ದೇವಸ್ಥಾನ



ಎಲಿ ಪೂಜೆ ಮಾಡಿದ ಶ್ರೀ ದರಿದೇವರ ದೇವಸ್ಥಾನ



ಶ್ರೀ ದರಿದೇವರ ಗದ್ದುಗೆಯ
ಎಡಬದಿಯಲ್ಲಿರುವ ಮಲ್ಲಯ್ಯ



ಶ್ರೀ ದರಿದೇವರ ಗದ್ದುಗೆಯ
ಬಲಬದಿಯಲ್ಲಿರುವ ಲಕ್ಷ್ಮಿದೇವಿ



ಶ್ರೀ ದರಿದೇವರ ವಿಶ್ರಾಂತಿ ಸ್ಥಳ





ವಾದ್ಯಗಳು



ಶ್ರೀ ದರಿದೇವರ ದೇವಸ್ಥಾನದಲ್ಲಿರುವ ಪೋಳಿಗಳು







ದ್ವಾರದಲ್ಲಿರುವ ಮೂರ್ತಿಶಿಲ್ಪಗಳು



ಗಣಪತಿ ಮೂರ್ತಿ



ಗಣಪತಿ ದೇವಸ್ಥಾನ



ಜಾತ್ರೆಗೆ ಬಂಡಿಯಲ್ಲಿ
ಆಗಮಿಸುತ್ತಿರುವ ಭಕ್ತರು



ಜಾತ್ರೆಯ ಒಂದು ದೃಶ್ಯ



ಮುಚ್ಚಂಡಿಯಲ್ಲಿರುವ ಬ್ರಹ್ಮಾನಂದರ
ಗದ್ದುಗೆ ಮುಂದಿರುವ ದೊಡ್ಡಗಣೇಶ



ಮುಚ್ಚಂಡಿಯಲ್ಲಿರುವ ಧರ್ಮಗುರು
ಬ್ರಹ್ಮಾನಂದರ ಗದ್ದುಗೆ



ಭೂಲೋಕ ದ್ವಾರ



ಮೃತ್ಯುಲೋಕ ದ್ವಾರ



ಕೈಲಾಸ ದ್ವಾರ



ದರಿದೇವರ ಪಾದಗಟ್ಟೆ



ದರಿದೇವರ ಪಂಚರಂಗಿ ಕುದುರೆ



ದರಿದೇವರ ದೀಪಸ್ಥಂಭ



ಶ್ರೀ ದರಿದೇವರ ವಿದ್ಯೆಕಲಿಸಿದ
ಗುರು ಶ್ರೀ ಶಂಕರಲಿಂಗನ
ಗದ್ದುಗೆ



ಶ್ರೀ ದರಿದೇವರ
ಶಂಕರಲಿಂಗನ ಪಂಚಲೋಹದ
ಮೂರ್ತಿ



ಶ್ರೀ ಶಂಕರಲಿಂಗನ ದೇವಸ್ಥಾನ
ಮೇಲಿರುವ ಮೂರು ಕಾಲಿನ
ಬ್ರಂಗಿಯ ಮೂರ್ತಿ



ಹಾಳುಬಿದ್ದ ದರಿದೇವರ
ರಾಜಧಾನಿ ಹುಪ್ಪದಟ್ಟಿ



ಹಾಳುಬಿದ್ದ ದರಿದೇವರ
ರಾಜಧಾನಿ ಹುಪ್ಪದಟ್ಟಿ



ಶ್ರೀ ದರಿದೇವರ
ರಕ್ಷಣೆಮಾಡುವ ಮಸುಬನ
ಮಂದಿರ

